# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 80 |
| ಸದಸ್ಯರ ಹೆಸರು : | ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) |
| ಉತ್ತರಿಸಬೇಕಾದ ದಿನಾಂಕ: | 09.07.2018 |
| ಉತ್ತರಿಸುವ ಸಚಿವರು : | ಮಾನ್ಯ ಗಣಿ ಮತ್ತು ಭೂವಿಜ್ಞಾನ ಹಾಗೂ ಮುಜರಾಯಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನದಿ ದಂಡೆ ಮೇಲಿರುವ ತೀರ್ಥಹಳ್ಳಿ ಮತ್ತು ಹೊಸನಗರ ತಾಲ್ಲೂಕುಗಳಲ್ಲಿ ಮರಳಿನ ಅಭಾವದಿಂದ ಗಾರೆ ಕೆಲಸಗಾರರಿಗೆ ನಿರುದ್ಯೋಗ ಸಮಸ್ಯೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ. | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಮರಳಿನ ಅಭಾವ ನೀಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು: | ಮರಳಿನ ಅಭಾವ ನೀಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳು<br>➢ ದಿನಾಂಕ: 12.08.2016 ರಂದು ಸರ್ಕಾರವು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿಗಳು, 1994ಕ್ಕೆ ತಿದ್ದುಪಡಿ ತಂದು, ತಿದ್ದುಪಡಿ 2016ರ ನಿಯಮಗಳನ್ನು ಜಾರಿಗೊಳಿಸಿದೆ. ತಿದ್ದುಪಡಿ ನಿಯಮ 2016ರಂತೆ ನದಿ ಪಾತ್ರಗಳಲ್ಲಿ ಗುರುತಿಸಿರುವ ಮರಳು ಬ್ಲಾಕ್‌ಗಳನ್ನು ಸಾರ್ವಜನಿಕ ಟೆಂಡರ್-ಕಂ-ಹರಾಜು ಮೂಲಕ ವಿಲೇಪಡಿಸಲು ಅವಕಾಶ ಕಲ್ಪಿಸಲಾಗಿರುತ್ತದೆ.<br>➢ ಅದರಂತೆ, ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾಲ್ಲೂಕು ತುಂಗಾ ನದಿ ಪಾತ್ರದ ಬಗ್ಗೋಡಿಗ್ಗಿ ಗ್ರಾಮ ವ್ಯಾಪ್ತಿಯಲ್ಲಿ 01 ಹಾಗೂ ಹೊಸ ನಗರ ತಾಲ್ಲೂಕು ಸೋನಲೆ, ಸುತ್ತಾ, ನಂಜುವಳ್ಳಿ ಗ್ರಾಮಗಳ ವ್ಯಾಪ್ತಿಯ ಶರಾವತಿ ನದಿ ಪಾತ್ರಗಳಲ್ಲಿ 03 ಮರಳು ಬ್ಲಾಕ್‌ಗಳನ್ನು ಮೊದಲ ಹಂತದಲ್ಲಿ ಟೆಂಡರ್-ಕಂ-ಇ-ಹರಾಜು ಮೂಲಕ ವಿಲೇವಾರಿ ಮಾಡಿ, ಯಶಸ್ವಿ ಬಿಡ್ದುದಾರರಿಗೆ ಮರಳು ಗುತ್ತಿಗೆಗಳನ್ನು ನಿಯಮಾನುಸಾರ ಮಂಜೂರು ಮಾಡಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳಿಂದ ಏಪ್ರಿಲ್-2018 ರಿಂದ ಇಲ್ಲಿಯವರೆಗೆ **58,755** ಮೆ.ಟನ್ ಮರಳನ್ನು ಸಾರ್ವಜನಿಕ ಹಾಗೂ ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗುತ್ತಿದೆ.<br>➢ ತೀರ್ಥಹಳ್ಳಿ ತಾಲ್ಲೂಕಿನ ಹುಣಸವಳ್ಳಿ ಗ್ರಾಮ ವ್ಯಾಪ್ತಿಯಲ್ಲಿ 01 ಮತ್ತು ಹೊಸನಗರ ತಾಲ್ಲೂಕಿನ ಸುತ್ತಾ ಗ್ರಾಮ ವ್ಯಾಪ್ತಿಯಲ್ಲಿ 01 ಮರಳು ಬ್ಲಾಕ್ ಸೇರಿದಂತೆ ಒಟ್ಟು 02 ಮರಳು ಬ್ಲಾಕ್‌ಗಳನ್ನು ಸರ್ಕಾರಿ ಕಾಮಗಾರಿಗೆ ಮಂಜೂರು ಮಾಡಲಾಗಿದ್ದು, ಸದರಿ ಮರಳು ಬ್ಲಾಕ್‌ಗಳಿಂದ ಸರ್ಕಾರಿ ಕಾಮಗಾರಿಗಳಿಗೆ ಹಾಗೂ ಆಶ್ರಯ ಮನೆ ಯೋಜನೆಗಳಿಗೆ ಮರಳನ್ನು ಪೂರೈಕೆ ಮಾಡಲಾಗುವುದು.<br>➢ ತೀರ್ಥಹಳ್ಳಿ ಹಾಗೂ ಹೊಸನಗರ ತಾಲ್ಲೂಕುಗಳ ನದಿ ಪಾತ್ರಗಳ ವ್ಯಾಪ್ತಿಯಲ್ಲಿ ಎರಡನೇ ಹಂತದಲ್ಲಿ 16 ಮರಳು ಬ್ಲಾಕ್‌ಗಳನ್ನು ಟೆಂಡರ್-ಕಂ-ಇ-ಹರಾಜು ಮೂಲಕ ವಿಲೇವಾರಿ ಮಾಡಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳ ಯಶಸ್ವಿ ಬಿಡ್ದುದಾರರಿಂದ ಪರಿಸರ ಅನುಮತಿ ಪತ್ರ ಪಡೆದು, ಮರಳು ಗಣಿ ಗುತ್ತಿಗೆ ಮಂಜೂರು ಮಾಡಲು ಕ್ರಮ ವಹಿಸಲಾಗುವುದು. |

| | | |
|---|---|---|
| ಇ) | ಕಸ್ತೂರಿ ರಂಗನ್ ವರದಿಯನ್ನು ಕೇಂದ್ರ ಸರ್ಕಾರ ಸ್ವೀಕರಿಸಿದೆಯೇ. ಇಲ್ಲದಿದ್ದಲ್ಲಿ ಕಲ್ಲು ಕ್ವಾರಿ ಮತ್ತು ಮರಳು ಕ್ವಾರಿಗಳ ಟೆಂಡರ್ ಕರೆಯಲು ಸರ್ಕಾರಕ್ಕೆ ಇರುವ ಅಡಚಣೆ ಏನು ? | ಡಾ: ಕಸ್ತೂರಿ ರಂಗನ್ ವರದಿಯನ್ನು ಕೇಂದ್ರ ಸರ್ಕಾರವು ಸ್ವೀಕರಿಸಿರುವ ಬಗ್ಗೆ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮಾಹಿತಿ ಪಡೆಯಬಹುದಾಗಿದೆ.<br>ಡಾ: ಕಸ್ತೂರಿ ರಂಗನ್ ವರದಿಯಲ್ಲಿ ಉಲ್ಲೇಖಿಸಿರುವ ಗ್ರಾಮಗಳ ವ್ಯಾಪ್ತಿಯಲ್ಲಿ ಕಲ್ಲು/ಮರಳು ಗಣಿ ಗುತ್ತಿಗೆ ಮಂಜೂರಾತಿಗೆ ಅರಣ್ಯ ಮತ್ತು ಪರಿಸರ ಜೀವಿಶಾಸ್ತ್ರ ಇಲಾಖೆಯು ಪರಿಸರ ಅನುಮತಿ ನೀಡಿದ್ದಲ್ಲಿ ಗಣಿ ಗುತ್ತಿಗೆ ಮಂಜೂರಾತಿಗೆ ಕ್ರಮ ವಹಿಸಲಾಗುವುದು. |

ಸಂಖ್ಯೆ:ಸಿಐ 243 ಎಂಎಂಎನ್ 2018

(ರಾಜಶೇಖರ್ ಪಾಟೀಲ್)
ಗಣಿ ಮತ್ತು ಭೂ ವಿಜ್ಞಾನ ಹಾಗೂ ಮುಜರಾಯಿ
ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 55 |
| 2. ಮಾನ್ಯ ಸದಸ್ಯರ ಹೆಸರು | ಮಾನ್ಯ ಶ್ರೀ ಗೂಳಿಹಟ್ಟಿ ಬಿ. ಶೇಖರ್ (ಹೊಸದುರ್ಗ) |
| 3. ಉತ್ತರಿಸಬೇಕಾದ ದಿನಾಂಕ | 09/07/2018 |
| 4. ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | **108 ಆರೋಗ್ಯ ಕವಚ ಯೋಜನೆಯಲ್ಲಿ ಸೇವೆ ಸಲ್ಲಿಸುತ್ತಿರುವ ಸಿಬ್ಬಂದಿಯನ್ನು ಸೇವೆಯಿಂದ ತೆಗೆಯಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಸಂಸ್ಥೆಯ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ;** | 108 ಆರೋಗ್ಯ ಕವಚ ಯೋಜನೆಯಲ್ಲಿ ಸೇವೆ ಸಲ್ಲಿಸುತ್ತಿರುವ ಸಿಬ್ಬಂದಿಯನ್ನು ಸೇವೆಯಿಂದ ತೆಗೆಯಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು, 150 ಮಂದಿ ಕಾರ್ಮಿಕರನ್ನು ದಿನಾಂಕ: 25.01.2016 ರಿಂದ ಕೆಲಸದಿಂದ ತೆಗೆದುಹಾಕಿರುವ ಬಗ್ಗೆ ಕರ್ನಾಟಕ ರಾಜ್ಯ ಆರೋಗ್ಯ ಕವಚ (108) ನೌಕರರ ಸಂಘ, ಬೆಂಗಳೂರು, ಇವರು ಕಾರ್ಮಿಕ ಇಲಾಖೆಯಲ್ಲಿ ಕೈಗಾರಿಕಾ ವಿವಾದವನ್ನು ಎತ್ತಿದ್ದರು. ಕಾರ್ಮಿಕರನ್ನು ಕೆಲಸದಿಂದ ವಜಾ ಮಾಡಿರುವುದು ಹಾಗೂ ವಿವಿಧ ಬೇಡಿಕೆಗಳ ಬಗ್ಗೆ ಎತ್ತಿರುವ ಕೈಗಾರಿಕಾ ವಿವಾದದ ಬಗ್ಗೆ ನಡೆಸಿದ ರಾಜೀ ಸಂಧಾನ ಪ್ರಯತ್ನಗಳು ವಿಫಲವಾದ ಕಾರಣ ವಿಫಲತೆಯಲ್ಲಿ ಮುಕ್ತಾಯಗೊಳಿಸಿ, ವಿವಾದವನ್ನು ನ್ಯಾಯ ನಿರ್ಣಯಕ್ಕಾಗಿ 1ನೇ ಅಪರ ಕಾರ್ಮಿಕ ನ್ಯಾಯಾಲಯ, ಬೆಂಗಳೂರು, ಇಲ್ಲಿಗೆ ದಿನಾಂಕ: 04.07.2016 ರಂದು ಕಳುಹಿಸಲಾಗಿರುತ್ತದೆ. |
| ಆ) | ತೆಗೆದು ಹಾಕಲಾದ ನೌಕರರನ್ನು ಪುನರ್ ನೇಮಕ ಮಾಡಿಕೊಳ್ಳುವ ಬಗ್ಗೆ ತೆಗೆದುಕೊಂಡ ಕ್ರಮಗಳೇನು; | ಕೈಗಾರಿಕಾ ವಿವಾದವು ನ್ಯಾಯ ನಿರ್ಣಯಕ್ಕಾಗಿ ಕಾರ್ಮಿಕ ನ್ಯಾಯಾಲಯದಲ್ಲಿ ಬಾಕಿ ಇರುವುದರಿಂದ ನ್ಯಾಯಾಲಯವು ನೀಡುವ ಐತೀರ್ಪನ್ನು ನಿರೀಕ್ಷಿಸಲಾಗಿದ್ದು; ಈ ಹಂತದಲ್ಲಿ ಸರ್ಕಾರವು ಯಾವುದೇ ಕ್ರಮವನ್ನು ತೆಗೆದುಕೊಳ್ಳಲು ಬರುವುದಿಲ್ಲ. |
| ಇ) | ರಾಜ್ಯದಲ್ಲಿ ಕಟ್ಟಡ ಕಾರ್ಮಿಕರ ನಿಧಿಯಲ್ಲಿ ಸಂಗ್ರಹಿಸಲಾದ ಒಟ್ಟು ಮೊತ್ತವೆಷ್ಟು; ಯಾವ ಯಾವ ಉದ್ದೇಶಕ್ಕೆ ಎಷ್ಟೆಷ್ಟು ಹಣ ಬಳಸಲಾಗಿದೆ? (ವಿವರ ನೀಡುವುದು) | 1996ರ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಸುಂಕ ಕಾಯ್ದೆ, ಮತ್ತು 1998ರ ನಿಯಮಾವಳಿಯ ಪ್ರಾವಧಾನಗಳಡಿ ಕಟ್ಟಡ ನಿರ್ಮಾಣ ಕಾಮಗಾರಿಗಳ ವೆಚ್ಚದ ಶೇ.1ರಷ್ಟು ಮೊತ್ತವನ್ನು ಸುಂಕವಾಗಿ ಸಂಬಂಧಿಸಿದ ಕಟ್ಟಡದ ಮಾಲೀಕರು ಮಂಡಳಿಗೆ ಪಾವತಿಸಬೇಕಿರುತ್ತದೆ.<br>• 2007 ರಿಂದ ಮೇ 2018 ರವರೆಗೆ ರೂ. 5032.42 ಕೋಟಿ ಮೊತ್ತವನ್ನು ಸಂಗ್ರಹಿಸಲಾಗಿದೆ.<br>• 2007 ರಿಂದ ಮೇ 2018 ರವರೆಗೆ ರೂ. 500.04 ಕೋಟಿ ಮೊತ್ತವನ್ನು ಸುಂಕ ನಿಧಿಯಿಂದ ಖರ್ಚು ಮಾಡಲಾಗಿರುತ್ತದೆ. |

- 2007 ರಿಂದ ಮೇ 2018 ರವರೆಗೆ ಖರ್ಚು ಮಾಡಿರುವ ಶೀರ್ಷಿಕೆವಾರು ವಿವರಗಳು ಈ ಕೆಳಕಂಡಂತಿವೆ;

| Sl No | Particulars | Total (in crore Rs.) |
|---|---|---|
| 1 | Capital Expenditure | 17.99 |
| 2 | Direct Expenditure (Social Securities) | 428.60 |
| 3 | Indirect Expenditure (Office & Administrative Expenses including Salary) | 53.81 |
| | **Total** | **500.04** |

**ಕಾಇ 245 ಎಲ್‌ಇಟಿ 2018**

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 90
ಸದಸ್ಯರ ಹೆಸರು : ಶ್ರೀ ಕೆ.ಎಂ. ಶಿವಲಿಂಗೇಗೌಡ (ಅರಸೀಕೆರೆ)
ಉತ್ತರಿಸುವವರು : ಮಾನ್ಯ ಸಣ್ಣ ಕೈಗಾರಿಕೆ ಸಚಿವರು
ಉತ್ತರಿಸಬೇಕಾದ ದಿನಾಂಕ : 09.07.2018.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ತಾಲ್ಲೂಕು ಮತ್ತು ಹೋಬಳಿ ಕೇಂದ್ರಗಳಲ್ಲಿ ಇಲಾಖೆ ವತಿಯಿಂದ ಜಮೀನುಗಳನ್ನು ಖರೀದಿಸಿ, ಮೂಲಭೂತ ಸೌಕರ್ಯ ಅಭಿವೃದ್ಧಿಪಡಿಸಿ ಉಚಿತವಾಗಿ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡುವ ಉದ್ದೇಶ ಸರ್ಕಾರದ ಮುಂದೆ ಇದೆಯೇ; | ರಾಜ್ಯದ ತಾಲ್ಲೂಕು ಮತ್ತು ಹೋಬಳಿ ಕೇಂದ್ರಗಳಲ್ಲಿ ಇಲಾಖೆ ವತಿಯಿಂದ ಜಮೀನುಗಳನ್ನು ಖರೀದಿಸಿ, ಮೂಲಭೂತ ಸೌಕರ್ಯ ಅಭಿವೃದ್ಧಿಪಡಿಸಿ ಉಚಿತವಾಗಿ ನೀಡುತ್ತಿಲ್ಲ. ಆದರೆ, ರಿಯಾಯಿತಿ ನೀಡುವುದರ ಮೂಲಕ ಪ್ರೋತ್ಸಾಹಿಸಲಾಗುತ್ತಿದೆ.<br><br>ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ಸೂಕ್ಷ್ಮ, ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಶೇ. 50ರಷ್ಟು ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು ನೀಡಲಾಗುತ್ತಿದೆ ಮತ್ತು ಶೆಡ್‌ಗಳನ್ನು ಶೇ.90 ರಷ್ಟು ರಿಯಾಯಿತಿ ದರದಲ್ಲಿ ನೀಡಲಾಗುತ್ತಿದೆ.<br><br>ಇತರೆ ಉದ್ಯಮಶೀಲರಿಗೆ ಕರ್ನಾಟಕ ಕೈಗಾರಿಕಾ ನೀತಿ 2014-19ರನ್ವಯ ಕೈಗಾರಿಕಾ ವಲಯಗಳನ್ನು ಮತ್ತು ಚಟುವಟಿಕೆಗಳನ್ನು ಆಧರಿಸಿ ಶೇ. 10 ರಿಂದ ಶೇ. 35 ರವರೆಗೆ ಬಂಡವಾಳ ಹೂಡಿಕೆ ಸಹಾಯಧನವನ್ನು ಭೂಮಿ ಮತ್ತು ಯಂತ್ರೋಪಕರಣಗಳ ಹೂಡಿಕೆಯ ಮೇಲೆ ನೀಡಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಯಾವಾಗ ಪ್ರಾರಂಭಿಸಲಾಗುವುದು? | ಅನ್ವಯಿಸುವುದಿಲ್ಲ. |

ಸಿಐ 64 ಸಿಎಸ್‌ಸಿ 2018

[ಎಸ್.ಆರ್. ಶ್ರೀನಿವಾಸ್ (ವಾಸು)]
ಸಣ್ಣ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಮಾನ್ಯ ಸದಸ್ಯರ ಹೆಸರು | ಮಾನ್ಯ ಡಾ|| ಕೆ. ಸುಧಾಕರ್ (ಚಿಕ್ಕಬಳ್ಳಾಪುರ) |
| 2. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 62 |
| 3. | ಉತ್ತರಿಸಬೇಕಾದ ದಿನಾಂಕ | 09/07/2018 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಬಳ್ಳಾಪುರ ವಿಧಾನಸಭಾ ಕ್ಷೇತ್ರದ ಅಸಂಘಟಿತ ಕಾರ್ಮಿಕರಿಗಾಗಿ ಒದಗಿಸಿರುವ ಸೌಲಭ್ಯಗಳು ಯಾವುವು; | ಚಿಕ್ಕಬಳ್ಳಾಪುರ ಜಿಲ್ಲೆಯು ಸೇರಿದಂತೆ ರಾಜ್ಯದ ಎಲ್ಲಾ ಅಸಂಘಟಿತ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಹಾಗೂ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಗಳನ್ನು ಸ್ಥಾಪಿಸಲಾಗಿದ್ದು, ಸದರಿ ಮಂಡಳಿಗಳ ವತಿಯಿಂದ ಹಲವಾರು ಯೋಜನೆಗಳನ್ನು ಜಾರಿಗೊಳಿಸಲಾಗಿರುತ್ತದೆ. ಸದರಿ ಯೋಜನೆಗಳಡಿ ಚಿಕ್ಕಬಳ್ಳಾಪುರ ಕ್ಷೇತ್ರದ ಅಸಂಘಟಿತ ಕಾರ್ಮಿಕರಿಗೆ ಒದಗಿಸಿರುವ ವಿವಿಧ ಸೌಲಭ್ಯಗಳ ವಿವರ ಈ ಕೆಳಕಂಡಂತಿವೆ.<br><br>***ಕರ್ನಾಟಕ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-***<br>ಚಿಕ್ಕಬಳ್ಳಾಪುರ ವಿಧಾನಸಭಾ ಕ್ಷೇತ್ರವ್ಯಾಪ್ತಿಯ ಅಸಂಘಟಿತ ವಲಯಕ್ಕೆ ಸೇರಿದ ನೋಂದಾಯಿತ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರಿಗೆ ಕರ್ನಾಟಕ ಕಟ್ಟಡ ಮತ್ತು ಇತರೇ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ಒದಗಿಸಿರುವ ಸೌಲಭ್ಯಗಳ ವಿವರವನ್ನು **ಅನುಬಂಧ-1** ರಲ್ಲಿ ಒದಗಿಸಿದೆ ಹಾಗೂ ಚಿಕ್ಕಬಳ್ಳಾಪುರ ವಿಧಾನ ಸಭಾ ಕ್ಷೇತ್ರದಲ್ಲಿ ನೋಂದಾಯಿತ ಫಲಾನುಭವಿಗಳಿಗೆ ಮಂಡಳಿಯ ವತಿಯಿಂದ 2007 ರಿಂದ ಜೂನ್ 2018 ರವರೆಗೆ ಒದಗಿಸಿರುವ ವಿವರಗಳನ್ನು **ಅನುಬಂಧ-2** ರಲ್ಲಿ ಒದಗಿಸಿದೆ.<br><br>***ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-***<br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ಜಾರಿಗೊಳಿಸಲಾಗುತ್ತಿರುವ **ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯಡಿ** ಚಿಕ್ಕಬಳ್ಳಾಪುರ ಜಿಲ್ಲೆಯ ವ್ಯಾಪ್ತಿಗೆ ಸೇರಿದ - **19,603**/ ಚಾಲಕರನ್ನು ಅಪಘಾತ ವಿಮಾ ವ್ಯಾಪ್ತಿಗೆ ಒಳಪಡಿಸಲಾಗಿದೆ. |

| | | |
|---|---|---|
| | | **ಈ ಯೋಜನೆಯಲ್ಲಿ ದೂರಕುವ ಸೌಲಭ್ಯಗಳು:**<br>1) ಈ ಯೋಜನೆಯ ಫಲಾನುಭವಿಯು ಅಪಘಾತಗೊಂಡು ಮರಣ ಹೊಂದಿದಲ್ಲಿ ಅವರ ನಾಮ ನಿರ್ದೇಶಿತರಿಗೆ ರೂ. **5.00** ಲಕ್ಷ ಪರಿಹಾರ ಸೌಲಭ್ಯ ಪಡೆಯಬಹುದು.<br>2) ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ. **2.00** ಲಕ್ಷದ ವರೆಗೆ ಪರಿಹಾರ ಸೌಲಭ್ಯ ಕಲ್ಪಿಸಲಾಗಿದೆ.<br>3) ತಾತ್ಕಾಲಿಕ ದುರ್ಬಲತೆ ಹೊಂದಿ ವೈದ್ಯಕೀಯ ಚಿಕಿತ್ಸೆ ಪಡೆದಲ್ಲಿ ರೂ. **1.00** ಲಕ್ಷದ ವರೆಗೆ ಚಿಕಿತ್ಸಾ ಮೊತ್ತ ಪಡೆಯಬಹುದಾಗಿದೆ.<br>ಚಿಕ್ಕಬಳ್ಳಾಪುರ ವಿಧಾನಸಭಾ ಕ್ಷೇತ್ರದಲ್ಲಿ ಈ ಯೋಜನೆಯಡಿಯಲ್ಲಿ ಪರಿಹಾರ ಪಡೆದುಕೊಂಡ ಚಾಲಕರ ವಿವರ ಈ ಕೆಳಕಂಡಂತಿವೆ.<br>• 6 ಮರಣ ಪ್ರಕರಣಗಳಲ್ಲಿ ರೂ.12.00 ಲಕ್ಷ ಪರಿಹಾರ ನೀಡಲಾಗಿದೆ.<br>• 2 ಪ್ರಕರಣಗಳಲ್ಲಿ ರೂ. 1,14,481/- ಪರಿಹಾರ ಸೌಲಭ್ಯ ಒದಗಿಸಲಾಗಿದೆ.<br>**ಎನ್.ಪಿ.ಎಸ್. ಲೈಟ್ ಸ್ವಾವಲಂಭನ್ ಪಿಂಚಣಿ ಯೋಜನೆ** : 43 ವಲಯದ ಅಸಂಘಟಿತ ಕಾರ್ಮಿಕರಿಗಾಗಿ ಮಂಡಳಿಯು ಜಾರಿಗೊಳಿಸುತ್ತಿರುವ ಈ ಯೋಜನೆಯಡಿ ರಾಜ್ಯದಲ್ಲಿ ಒಟ್ಟು **50,666** ಕಾರ್ಮಿಕರು ನೋಂದಾಯಿಸಿಕೊಂಡಿದ್ದು ಅದರಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿ ನೋಂದಣಿ ಮಾಡಿಕೊಂಡ ಕಾರ್ಮಿಕರ ಸಂಖ್ಯೆ: **817**.<br>➢ ಅಸಂಘಟಿತ ಕಾರ್ಮಿಕರಿಗೆ ವೃದ್ಧಾಪ್ಯದ ಸಮಯದಲ್ಲಿ ಆರ್ಥಿಕ ಭದ್ರತೆ ಒದಗಿಸಿ, ಪಿಂಚಣಿ ಸೌಲಭ್ಯದ ಲಾಭ ಒದಗಿಸುವ ಉದ್ದೇಶದಿಂದ ಭಾರತ ಸರ್ಕಾರದ ಆರ್ಥಿಕ ಸಚಿವಾಲಯದವರು ***"ಸ್ವಾವಲಂಭನ್" ಯೋಜನೆ***ಯನ್ನು ಪ್ರಾರಂಭಿಸಿರುತ್ತಾರೆ.<br>➢ ಪ್ರತೀ ಮಾಹೆ ಕನಿಷ್ಟ ರೂ.100 ರಂತೆ ಹತ್ತು ತಿಂಗಳು ಎನ್.ಪಿ.ಎಸ್. ಲೈಟ್‌ಗೆ ಪಾವತಿಸುವ ವಂತಿಕೆದಾರರು ಕೇಂದ್ರದ ಸ್ವಾವಲಂಭನ್ ಯೋಜನೆಯಿಂದ ಪ್ರತೀ ವರ್ಷ ರೂ.1000/- ವಂತಿಕೆ ಪಡೆಯಲು ಅರ್ಹರಾಗುತ್ತಾರೆ.<br>➢ ಪ್ರತೀ ವರ್ಷ ರೂ.1200/ನ್ನು ಪಾವತಿ ಮಾಡುವ ವಂತಿಕೆದಾರರು ರಾಜ್ಯ ಸರ್ಕಾರದಿಂದಲೂ ಸಹ ವಾರ್ಷಿಕವಾಗಿ ಗರಿಷ್ಟ ರೂ.1200/-ರ ಸಮಾನಾಂತರ ವಂತಿಕೆಯನ್ನು (Matching Contribution) ಪಡೆಯಲು ಅರ್ಹರಾಗುತ್ತಾರೆ. |

| | | |
|---|---|---|
| | | ➢ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಂತಿಕೆದಾರರಿಗೆ ರಾಜ್ಯ ಸರ್ಕಾರದ ಸಮಾನಾಂತರ ವಂತಿಕೆಯನ್ನು ಅವರು ಪಾವತಿಸುವ ವಂತಿಕೆಯ ಎರಡರಷ್ಟು ಅಂದರೆ ವಾರ್ಷಿಕ ಗರಿಷ್ಠ ರೂ.2,400/-ಗಳ ಮಿತಿಗೊಳಪಟ್ಟು ಪಾವತಿಸಲಾಗುವುದು.<br>➢ ಫಲಾನುಭವಿಯು 60 ವರ್ಷ ಪೂರೈಸಿದಾಗ ಆತನು ಯೋಜನೆಗೆ ಕಟ್ಟಿದ ಹಣದ ಶೇ.60ರಷ್ಟನ್ನು ನಗದು ರೂಪದಲ್ಲಿ ಪಡೆಯಬಹುದಾಗಿದ್ದು ಉಳಿದ ಶೇ.40ರಷ್ಟನ್ನು ಲೆಖ್ಖ ಹಾಕಿ ಮಾಸಿಕ ಪಿಂಚಣಿಯನ್ನು ನಿಗದಿಗೊಳಿಸಲಾಗುವುದು. ವಂತಿಕೆದಾರನು / ಳು ಇಚ್ಚಿಸಿದ್ದಲ್ಲಿ ಸಂಗ್ರಹವಾಗುವ ಸಂಪೂರ್ಣ ಮೊತ್ತವನ್ನು ಪಿಂಚಣಿಗಾಗಿ ತೇವಣಿ ಮಾಡಲು ಅವಕಾಶವಿರುತ್ತದೆ.<br><br>ಕೇಂದ್ರ ಸರ್ಕಾರವು **ಅಟಲ್ ಪಿಂಚಣಿ** ಯೋಜನೆಯನ್ನು ಜಾರಿಗೆ ತಂದಿರುವುದರಿಂದ, ದಿನಾಂಕ: 01-04-2015 ರಿಂದ ಎನ್.ಪಿ.ಎಸ್. ಯೋಜನೆಯಡಿ ಹೊಸ ನೋಂದಣಿಯನ್ನು ಸ್ಥಗಿತಗೊಳಿಸಲಾಗಿದೆ. |
| ಆ) | ಪ್ರಸ್ತುತ ಇಂತಹ ಕಾರ್ಮಿಕರಿಗೆ ಒದಗಿಸುತ್ತಿರುವ ವೈದ್ಯಕೀಯ ಚಿಕಿತ್ಸೆಯ ಅನುದಾನವು ತುಂಬಾ ಕಡಿಮೆ ಇದ್ದು, ಹೆಚ್ಚಿಸಲು ಕ್ರಮ ಕೈಗೊಳ್ಳಲಾಗಿದೆಯೇ (ವಿವರ ಒದಗಿಸುವುದು). | ಅಸಂಘಟಿತ ಕಾರ್ಮಿಕರ ವೈದ್ಯಕೀಯ ಸಹಾಯ ಧನಕ್ಕೆ ಸಂಬಂಧಿಸಿದಂತೆ ಇಲಾಖೆಯ ಅಧೀನದಲ್ಲಿ ಬರುವ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ, ಮತ್ತು ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ವಿವಿಧ ಸೌಲಭ್ಯಗಳನ್ನು ಒದಗಿಸಲಾಗುತ್ತಿದ್ದು, ಅವುಗಳ ವಿವರ ಕೆಳಕಂಡಂತಿವೆ.<br>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ 1996ರ ಕರ್ನಾಟಕ ನಿಯಮಗಳು 2006ರ ನಿಯಮ 46ರಡಿ ನಿಗಧಿ ಪಡಿಸಿರುವ ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ)ದ ಮೊತ್ತವನ್ನು ಪ್ರಸ್ತುತ ರೂ. 6000/- ಗಳಿಂದ ರೂ.10,000/- ಗಳವರೆಗೆ ದಿನಾಂಕ 15-11-2017 ರಂದು ಹೊರಡಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ. ಎಲ್‌ಡಿ 271 ಎಲ್‌ಇಟಿ 2017 ರಲ್ಲಿ ಹೆಚ್ಚಿಸಲಾಗಿರುತ್ತದೆ.<br><br>ಇದೇ ಅಧಿಸೂಚನೆಯಲ್ಲಿ ಸದರಿ ಸೌಲಭ್ಯವನ್ನು ನೋಂದಾಯಿತ ಫಲಾನುಭವಿಯ ಅವಲಂಬಿತರಿಗೂ ವಿಸ್ತರಿಸಲಾಗಿರುತ್ತದೆ. |

| | | |
|---|---|---|
| | | ಇದಲ್ಲದೇ, ಕರ್ನಾಟಕ ನಿಯಮಗಳು 2006ರ ನಿಯಮ 48ರಡಿ ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಬಿತರಿಗೆ ರೂ.2,00,000/- ಗಳವರೆಗೆ ನಿಗಧಿತ ಖಾಯಿಲೆಗಳಿಗೆ ಪ್ರಮುಖ ವೈದ್ಯಕೀಯ ವೆಚ್ಚ (ಕಾರ್ಮಿಕ ಚಿಕಿತ್ಸಾ ಭಾಗ್ಯ) ವನ್ನು ಸಹ ನೀಡಲಾಗುತ್ತಿದೆ.<br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-**<br>ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯಡಿ ಸರ್ಕಾರಿ ಆದೇಶದನುಸಾರ ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ.2.00 ಲಕ್ಷದ ವರೆಗೆ ಹಾಗೂ ತಾತ್ಕಾಲಿಕ ದುರ್ಬಲತೆ ಹೊಂದಿ ಚಿಕಿತ್ಸೆ ಪಡೆದಲ್ಲಿ ರೂ. 1.00 ಲಕ್ಷದವರೆಗೆ ವೈದ್ಯಕೀಯ ಚಿಕಿತ್ಸಾ ವೆಚ್ಚ ಪಡೆಯಬಹುದಾಗಿದ್ದು, ಅಪಘಾತ ಮರಣ ಪ್ರಕರಣಗಳಲ್ಲಿ ಮಾತ್ರ ಪರಿಹಾರದ ಮೊತ್ತವನ್ನು ರೂ. 2.00 ದಿಂದ ರೂ. 5.00 ಲಕ್ಷಕ್ಕೆ ಹೆಚ್ಚಿಸಲಾಗಿದೆ. |

**ಕಾಇ 250 ಎಲ್‌ಇಟಿ 2018**

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

## ಅನುಬಂಧ-1

### ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಫಲಾನುಭವಿಗಳಿಗೆ ದೊರಕುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** **ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ** ಮಾಸಿಕ ರೂ.1,000/-
2. **ದುರ್ಬಲತೆ ಪಿಂಚಣಿ:** ಫಲಾನುಭವಿಗೆ ಖಾಯಿಲೆಗಳಿಂದ ಹಾಗೂ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.1,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ. 2,00,000/-**ದವರೆಗೆ ಅನುಗ್ರಹ ರಾಶಿ ಸಹಾಯಧನ.
3. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ)** : ರೂ.20,000/-ವರೆಗೆ
4. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/-ದವರೆಗೆ ಮುಂಗಡ ಸೌಲಭ್ಯ
5. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
6. **ಅಂತ್ಯಕ್ರಿಯೆ ವೆಚ್ಚ** : **ರೂ.4,000/-** ಹಾಗೂ ಎಕ್ಸ್‌ಗ್ರೇಷಿಯಾ **ರೂ.50,000/-**ಸಹಾಯಧನ
7. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**
   - i) 1, 2 ಹಾಗೂ 3ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 2,000/-**
   - ii) 4, 5 ಹಾಗೂ 6ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 3,000/-**
   - iii) 7 ಹಾಗೂ 8ನೇ ತರಗತಿ ಉತ್ತೀರ್ಣರಾದವರಿಗೆ **ರೂ. 4,000/-**
   - iv) 9, 10 ನೇ ತರಗತಿ ಹಾಗೂ ಪ್ರಥಮ ಪಿಯುಸಿಉತ್ತೀರ್ಣರಾದವರಿಗೆ **6,000/-**
   - v) ದ್ವಿತೀಯ ಪಿ.ಯು.ಸಿ ಉತ್ತೀರ್ಣರಾದವರಿಗೆ **ರೂ. 8,000/-**
   - vi) ಐಟಿಐ ಮತ್ತು ಡಿಪ್ಲೋಮಾ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 7,000/-**
   - vii) ಪದವಿ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 10,000/-**
   - viii) ಸ್ನಾತಕೋತ್ತರ ಪದವಿ ಸೇರ್ಪಡೆಗೆ **ರೂ. 20,000/-** ಹಾಗೂ ಪ್ರತಿ ವರ್ಷ **ರೂ.10,000/-**ಗಳಂತೆ (ಎರಡು ವರ್ಷಗಳಿಗೆ)
   - ix) ಇಂಜಿನಿಯರಿಂಗ್ ಕೋರ್ಸ್‌ಗೆ ಸೇರ್ಪಡೆಗೆ **ರೂ.25,000/-** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.20,000/-**
   - x) ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ **ರೂ.30,000/-** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.25,000/-**
   - **xi)** ಪಿಹೆಚ್‌ಡಿ ಕೋರ್ಸ್‌ಗೆ ಪ್ರತಿ ವರ್ಷಕ್ಕೆ **ರೂ.20,000/-** (ಗರಿಷ್ಠ ಎರಡು ವರ್ಷಗಳು) ಮತ್ತು ಪಿಹೆಚ್‌ಡಿ ಪ್ರಬಂಧ ಸ್ವೀಕಾರದ ನಂತರ ಹೆಚ್ಚುವರಿಯಾಗಿ **ರೂ.20,000/-**

**ಪ್ರತಿಭಾವಂತ ಮಕ್ಕಳಿಗಾಗಿ:**

(a) ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.5,000/-**

(b) ಪಿಯುಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.7,000/-**

(c) ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ **ರೂ.10,000/-**

(d) ಸ್ನಾತಕೋತ್ತರ ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ:75 ಅಂಕ ಪಡೆದವರಿಗೆ **ರೂ.15,000/-**

8. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ)**: ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/–** ರಿಂದ **ರೂ.10,000/–ವರೆಗೆ**
9. **ಅಪಘಾತ ಪರಿಹಾರ**: ಮರಣ ಹೊಂದಿದ್ದಲ್ಲಿ **ರೂ.5,00,000/–**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ. 2,00,000/–** ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/–**
10. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ)**: ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೋಕೇಶನ್ ಚಿಕಿತ್ಸೆ, ಸಾಮಾನ್ಯ ಶಸ್ತ್ರಚಿಕಿತ್ಸೆಗಳಿಗೆ **ರೂ.2,00,000/–ವರೆಗೆ**
11. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್)**: ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/–**
12. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ)**: ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್ ಮತ್ತು ಪ್ರತಿ ಮೂರು ತಿಂಗಳಿಗೆ ಒಮ್ಮೆ ಸಿಲಿಂಡರ್ ರೀಫಿಲ್
13. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ**: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
14. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ**: ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು
ಮಕ್ಕಳಿಗೆ
15. **ತಾಯಿ ಮಗು ಸಹಾಯ ಹಸ್ತ**: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/–ಗಳ ಸಹಾಯಧನ

# ಅನುಬಂಧ-2

**ಚಿಕ್ಕಬಳ್ಳಾಪುರ ವಿಧಾನಸಭಾ ಕ್ಷೇತ್ರದಲ್ಲಿ ನೋಂದಾಯಿತ ಫಲಾನುಭವಿಗಳಿಗೆ ಮಂಡಳಿಯ ವತಿಯಿಂದ 2007 ರಿಂದ ಜೂನ್ 2018 ರವರೆಗೆ ಒದಗಿಸಿರುವ ಸೌಲಭ್ಯಗಳ ವಿವರ**

| ಕ್ರ.ಸಂ | ಸೌಲಭ್ಯಗಳು | ಫಲಾನುಭವಿಗಳ ಸಂಖ್ಯೆ | ಮಂಜೂರು ಮಾಡಲಾದ ಸಹಾಯ ಧನದ ಮೊತ್ತ |
|---|---|---|---|
| 1 | ಶೈಕ್ಷಣಿಕ ಸಹಾಯ ಧನ | 1226 | 74,75,980.00 |
| 2 | ಮದುವೆ ಸಹಾಯ ಧನ | 154 | 75,80,000.00 |
| 3 | ಅಂತ್ಯಸಂಸ್ಕಾರ & ಅನುಗ್ರಹ ರಾಶಿ | 107 | 54,03,000.00 |
| 4 | ಪ್ರಮುಖ ವೈದ್ಯಕೀಯ ಸಹಾಯ ಧನ | 05 | 2,46,200.00 |
| 5 | ವೈದ್ಯಕೀಯ ಸಹಾಯ ಧನ | 01 | 1,100.00 |
| 6 | ಅಪಘಾತ ಪರಿಹಾರ | 07 | 17,04,000.00 |
| | **ಒಟ್ಟು** | **1,500** | **2,24,10,280.00** |

# ಕರ್ನಾಟಕ ವಿಧಾನ ಸಭೆ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 109 |
| 2. ಮಾನ್ಯ ಸದಸ್ಯರ ಹೆಸರು | ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಕೆ. ರಘುಪತಿ ಭಟ್ (ಉಡುಪಿ) |
| 3. ಉತ್ತರಿಸಬೇಕಾದ ದಿನಾಂಕ | 09/07/2018 |
| 4. ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕ ಇಲಾಖೆಯಲ್ಲಿ ಕಾರ್ಮಿಕರನ್ನು ನೋಂದಾಯಿಸಲು ಇರುವ ನಿಯಮಗಳೇನು: (ಸದರಿ ನಿಯಮಗಳ ಸಂಪೂರ್ಣ ವಿವರಗಳನ್ನು ಒದಗಿಸುವುದು) | ಕಾರ್ಮಿಕ ಇಲಾಖೆಯ ವತಿಯಿಂದ ಕಾರ್ಮಿಕರನ್ನು ನೇರವಾಗಿ ನೋಂದಾಯಿಸಲಾಗುವುದಿಲ್ಲ. ಆದರೆ, ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ** ಮತ್ತು **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗಳ** ವತಿಯಿಂದ ಕಾರ್ಮಿಕರಿಗೆ ವಿವಿಧ ಸೌಲಭ್ಯಗಳನ್ನು ನೀಡಲಾಗುತ್ತಿದ್ದು ಅರ್ಹ ಕಾರ್ಮಿಕರನ್ನು ಆಯಾ ಮಂಡಳಿಯ ಫಲಾನುಭವಿಗಳಾಗಿ ನಿಯಮಾನುಸಾರ ನೋಂದಣಿ ಮಾಡಲಾಗುತ್ತಿದೆ. ಅವುಗಳ ವಿವರ ಈ ಕೆಳಕಂಡಂತಿವೆ.<br><br>***ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-***<br><br>1996ರ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆಯ ಕಲಂ 12 ಮತ್ತು 2006 ರ ಕರ್ನಾಟಕ ನಿಯಮಾವಳಿಯ ನಿಯಮ 20ರ ಪ್ರಾವಧಾನಗಳಡಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಯಾಗಿ ನೋಂದಣಿಯಾಗಲು ಇರಬೇಕಾದ ಅರ್ಹತೆಗಳು:<br>1. ಕಾರ್ಮಿಕರು ನೋಂದಣಿ ಪೂರ್ವದ 12 ತಿಂಗಳ ಅವಧಿಯಲ್ಲಿ 90 ದಿನಗಳು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಾಗಿ ಕೆಲಸ ಮಾಡಿರಬೇಕು.<br>2. 18–60 ರ ವಯೋಮಾನದವರಾಗಿರಬೇಕು.<br><br>**2) ಫಲಾನುಭವಿಯು ಮಂಡಳಿಗೆ ಪಾವತಿಸಬೇಕಾದ ನೋಂದಣಿ ಶುಲ್ಕ ಮತ್ತು ವಂತಿಕೆ:**<br><br>ಕಾರ್ಮಿಕರು ಮಂಡಳಿಯ ಫಲಾನುಭವಿಯಾಗಿ ನೋಂದಣಿ ಹೊಂದಲು ನೋಂದಣಿ ಶುಲ್ಕ ರೂ.25/– ಹಾಗೂ ರೂ.25/–ರ ವಂತಿಕೆ ಹಣವನ್ನು ಪ್ರತೀ ವರ್ಷ ನೋಂದಣಾ ಅಧಿಕಾರಿಗಳಲ್ಲಿ ಪಾವತಿ ಮಾಡಬೇಕು.<br><br>**3) ನೋಂದಣಿಗಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳು:**<br>1) ನಮೂನೆ– V–1 ರಲ್ಲಿ ಅರ್ಜಿ.<br>2) ಪಾಸ್ ಪೋರ್ಟ್ ಅಳತೆಯ ಭಾವಚಿತ್ರ.<br>3) 90 ದಿನಗಳು ಕೆಲಸ ಮಾಡಿರುವ ಕುರಿತು ಕಟ್ಟಡದ ಮಾಲೀಕರು/ಗುತ್ತಿಗೆದಾರರು, CREDAI, BAI, Karnataka State Contractors Association, ನೋಂದಾಯಿತ ಕಾರ್ಮಿಕ ಸಂಘಟನೆಗಳು, ಗ್ರಾಮ ಪಂಚಾಯಿತಿ ಕಾರ್ಯದರ್ಶಿ/ ಪಿಡಿಓ, ಹಿರಿಯ ಕಾರ್ಮಿಕ ನಿರೀಕ್ಷಕರು / ಕಾರ್ಮಿಕ ನಿರೀಕ್ಷಕರು ಗಳಿಂದ ಪಡೆದಿರುವ 'ಉದ್ಯೋಗ ಪ್ರಮಾಣ ಪತ್ರ'. |

4) <u>ವಯಸ್ಸಿನ ದೃಢೀಕರಣ ಪತ್ರ:</u>

ಶಾಲಾ ದಾಖಲಾತಿ, ವಾಹನ ಚಾಲನಾ ಪರವಾನಗಿ, ಪಾಸ್‌ಪೋರ್ಟ್, ಎಪಿಕ್ ಕಾರ್ಡ್, ಆಧಾರ್ ಕಾರ್ಡ್, ಎಲ್‌ಐಸಿ ವಿಮೆ ಪಾಲಿಸಿ ಅಥವಾ ಗ್ರಾಮ ಲೆಕ್ಕಿಗಳು ಅಥವಾ ಕಂದಾಯ ನಿರೀಕ್ಷಕರು ಅಥವಾ ಸ್ಥಳೀಯ ಸಂಸ್ಥೆಯ ಅಧಿಕಾರಿಗಳು ಅಥವಾ ಜನನ ಮತ್ತು ಮರಣ ನೋಂದಣಾಧಿಕಾರಿಗಳಿಂದ ವಿತರಿಸಿದ ಪ್ರಮಾಣ ಪತ್ರ ಅಥವಾ ಸರ್ಕಾರಿ ಆಸ್ಪತ್ರೆ/ಇಎಸ್ಐ ಆಸ್ಪತ್ರೆ/ಸ್ಥಳೀಯ ಸಂಸ್ಥೆಗಳ ಆಸ್ಪತ್ರೆ ಅಥವಾ ನೋಂದಾಯಿತ ಎಂಬಿಬಿಎಸ್, ಆಯುರ್ವೇದ, ಯುನಾನಿ ಅಥವಾ ಹೋಮಿಯೋಪತಿ ವೈದ್ಯರು, ನೋಂದಾಯಿತ ಖಾಸಗಿ ಬಿ.ಡಿಎಸ್. ವಿದ್ಯಾರ್ಹತೆ ಹೊಂದಿದಂತ ವೈದ್ಯರಿಂದ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ದಾಖಲೆ.

5) ಸ್ವಯಂ ಧೃಡಿಕೃತ ಆಧಾರ್ ಕಾರ್ಡ್ (ಕಡ್ಡಾಯವಾಗಿ ಸಲ್ಲಿಸಬೇಕು)

*<u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-</u>*

- ಈ ಮಂಡಳಿಯ ವತಿಯಿಂದ ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಿಗೆ ಅಪಘಾತ ವಿಮಾ ಪರಿಹಾರ ಯೋಜನೆಯನ್ನು ಜಾರಿಗೊಳಿಸುತ್ತಿದ್ದು, ಸದರಿ ಯೋಜನೆಯಡಿ ಕರ್ನಾಟಕ ರಾಜ್ಯ ಸಾರಿಗೆ ಇಲಾಖೆಯಿಂದ ಪಡೆದ ಊರ್ಜಿತ ವಾಣಿಜ್ಯ ಚಾಲನಾ ಪರವಾನಿಗೆ ಹೊಂದಿದ ರಾಜ್ಯದ ಎಲ್ಲಾ ಚಾಲಕರು ಈ ಯೋಜನೆಯ ಫಲಾನುಭವಿಗಳೆಂದು ಪರಿಗಣಿಸಲಾಗುತ್ತದೆ ಹಾಗೂ ಸದರಿ ಚಾಲಕರು ಮಂಡಳಿಯಲ್ಲಿ ಪ್ರತ್ಯೇಕವಾಗಿ ನೋಂದಣಿ ಮಾಡಿಸುವ ಅಗತ್ಯವಿರುವುದಿಲ್ಲ. ಅವರೆಲ್ಲರೂ ಈ ಯೋಜನೆಯ ವಿಮಾ ಪರಿಹಾರ ಸೌಲಭ್ಯಗಳನ್ನು ಪಡೆಯಬಹುದು.
- ಈ ಯೋಜನೆಯಡಿ ನಿರ್ವಾಹಕರು ಹಾಗೂ ಕ್ಲೀನರ್‌ಗಳು ನೋಂದಣಾಧಿಕಾರಿಗಳಲ್ಲಿ ನೋಂದಾಯಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ.
- 2017-18ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದಂತೆ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಹಮಾಲರು, ಗೃಹ ಕಾರ್ಮಿಕರು, ಚಿಂದಿ ಆಯುವವರು, ಟೈಲರ್‌ಗಳು ಹಾಗೂ ಮೆಕ್ಯಾನಿಕ್ ಈ 5 ವಲಯದ ಕಾರ್ಮಿಕರನ್ನು ನೋಂದಣಿ ಮಾಡುತ್ತಿದ್ದು, ಸದರಿ ಕಾರ್ಮಿಕರು ಮಂಡಳಿಯಲ್ಲಿ ಹಾಗೂ ರಾಜ್ಯದ ಎಲ್ಲಾ ಜಿಲ್ಲೆಗಳ ಕಾರ್ಮಿಕ ಇಲಾಖೆಯ ಕಛೇರಿಗಳಲ್ಲಿ ದೊರೆಯುವ ಸ್ವಯಂ ಘೋಷಣಾ ಅರ್ಜಿಗಳನ್ನು ಭರ್ತಿ ಮಾಡಿ, ಆಧಾರ್ ಕಾರ್ಡ್ ಹಾಗೂ ಭಾವಚಿತ್ರದೊಂದಿಗೆ ಸಲ್ಲಿಸಿ, ಗುರುತಿನ ಚೀಟಿ (ಸ್ಮಾರ್ಟ್ ಕಾರ್ಡ್) ಪಡೆಯಬಹುದಾಗಿದೆ.

*<u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-</u>*

ಈ ಮಂಡಳಿಯು ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಯಾಗಿದ್ದು, 1965ರ ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯ್ದೆ ಮತ್ತು 1968ರ ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ನಿಯಮಾವಳಿಯ ಪ್ರಾವಧಾನಗಳನ್ವಯ ನೋಂದಾಯಿತ ಕಾರ್ಖಾನೆಗಳು ಮತ್ತು 50 ಕ್ಕಿಂತ ಹೆಚ್ಚು ಕಾರ್ಮಿಕರನ್ನು ನೇಮಕ ಮಾಡಿಕೊಂಡು ಚಟುವಟಿಕೆಗಳನ್ನು ನಡೆಸುತ್ತಿರುವ ಸಂಸ್ಥೆಗಳಲ್ಲಿ

| | | |
|---|---|---|
| | | ಕೆಲಸ ಮಾಡುವ ಕಾರ್ಮಿಕರು ಈ ಮಂಡಳಿಯ ಫಲಾನುಭವಿಗಳಾಗಿದ್ದು, ಪ್ರತೀ ಕ್ಯಾಲೆಂಡರ್ ವರ್ಷದ ಅಂತ್ಯದ ಡಿಸೆಂಬರ್ ಮಾಹೆಯ ವೇತನ ರಿಜಿಸ್ಟರ್‌ನಲ್ಲಿ ನಮೂದಿಸಿರುವ ಪ್ರತಿಯೊಬ್ಬ ಕಾರ್ಮಿಕರಿಗೆ ತಲಾ ರೂ. 20/- ಗಳ ವಂತಿಗೆಯನ್ನು ಅವರ ವೇತನದಲ್ಲಿ ಕಟಾಯಿಸುವುದು ಮತ್ತು ಮಾಲೀಕರ ವಂತಿಗೆ ಪ್ರತಿಯೊಬ್ಬ ಕಾರ್ಮಿಕನಿಗೆ ರೂ. 40/- ರಂತೆ ಪ್ರತಿ ಕಾರ್ಮಿಕನಿಗೆ ವರ್ಷಕ್ಕೊಮ್ಮೆ ಒಟ್ಟು ರೂ. 60/- ಗಳ ವಂತಿಗೆ ಮೊತ್ತವನ್ನು ಕಲ್ಯಾಣ ನಿಧಿಗೆ ಮಾಲೀಕರು ಜಮಾ ಮಾಡಬೇಕಾಗುತ್ತದೆ. ಅಲ್ಲದೇ, ಸರ್ಕಾರವು ಪ್ರತಿ ಕಾರ್ಮಿಕನಿಗೆ ರೂ. 20/- ಗಳ ಸಮಾನಾಂತರ ವಂತಿಕೆಯನ್ನು ಪಾವತಿಸುತ್ತದೆ. ಸದರಿ ನಿಧಿಯಿಂದ ಸಂಘಟಿತ ಕಾರ್ಮಿಕರಿಗೆ ವಿವಿಧ ಸೌಲಭ್ಯಗಳನ್ನು ನೀಡಲಾಗುತ್ತಿದೆ. |
| ಆ) | ನೋಂದಾವಣೆಗೊಂಡ ಕಾರ್ಮಿಕರಿಗೆ ಇಲಾಖೆ ನೀಡುವ ಸವಲತ್ತುಗಳೇನು: | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ *ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ, ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ ಮತ್ತು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಗಳ* ವತಿಯಿಂದ ನಿಯಮಾನುಸಾರ ಫಲಾನುಭವಿಗಳಾಗಿ ನೋಂದಣಿಯಾದ ಕಾರ್ಮಿಕರಿಗೆ ವಿವಿಧ ಸೌಲಭ್ಯಗಳನ್ನು ನೀಡಲಾಗುತ್ತಿದ್ದು; ಸೌಲಭ್ಯಗಳ ವಿವರಗಳು ಈ ಕೆಳಕಂಡಂತಿವೆ;<br><br>***ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-***<br><br>ಈ ಮಂಡಳಿಯಲ್ಲಿ ನೋಂದಾಯಿತರಾದ ಫಲಾನುಭವಿಗಳಿಗೆ ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಆರ್ಥಿಕ ಸೌಲಭ್ಯಗಳನ್ನು ನೀಡಲಾಗುತ್ತಿದ್ದು ಅದರ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ.<br><br>***ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-***<br><br>ಈ ಮಂಡಳಿ ವತಿಯಿಂದ ಜಾರಿಗೊಳಿಸಲಾಗುತ್ತಿರುವ ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಿಗೆ ಅಪಘಾತ ವಿಮಾ ಪರಿಹಾರ ಯೋಜನೆಯಡಿ ದೊರಕುವ ಸೌಲಭ್ಯಗಳು:<br>1. ಅಪಘಾತ ಹೊಂದಿ ಚಾಲಕರು ಮೃತರಾದಲ್ಲಿ ಅವರ ಅವಲಂಭಿತರಿಗೆ ರೂ. 5.00 ಲಕ್ಷ ಪರಿಹಾರ<br>2. ಶಾಶ್ವತ ದುರ್ಬಲತೆ ಹೊಂದಿದಲ್ಲಿ ಅಂತಹ ಚಾಲಕರಿಗೆ ರೂ.2.00 ಲಕ್ಷದವರೆಗೆ ಪರಿಹಾರ.<br>3. ತಾತ್ಕಾಲಿಕ ದುರ್ಬಲತೆ ಹೊಂದಿ ಚಿಕಿತ್ಸೆ ಪಡೆದಲ್ಲಿ ಅಂತಹ ಚಾಲಕರಿಗೆ ರೂ.1.00 ಲಕ್ಷದವರೆಗೆ ಪರಿಹಾರ.<br><br>***ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:-***<br><br>ಈ ಮಂಡಳಿಯ ವತಿಯಿಂದ ರಾಜ್ಯದ ವಿವಿಧ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಕಾರ್ಮಿಕರಿಗೆ ನಿಯಮಾನುಸಾರ ಮಂಡಳಿಗೆ ವಂತಿಕೆ ಪಾವತಿ ಮಾಡುತ್ತಿರುವ ಸಂಘಟಿತ ಕಾರ್ಮಿಕರಿಗೆ ಕಾರ್ಮಿಕ ಕಲ್ಯಾಣ ಮಂಡಳಿಯ ಯೋಜನೆಗಳಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>1. ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನಸಹಾಯ<br>2. ಕಾರ್ಮಿಕರಿಗೆ ವೈದ್ಯಕೀಯ ನೆರವು<br>3. ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನಸಹಾಯ |

| | | |
|---|---|---|
| | | 4. ವಾರ್ಷಿಕ ಕ್ರೀಡಾ ಚಟುವಟಿಕೆ ಹಮ್ಮಿಕೊಳ್ಳುವ ನೋಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ<br>5. ವಾರ್ಷಿಕ ವೈದ್ಯಕೀಯ ತಪಾಸಣೆಯನ್ನು ನಡೆಸುವ ಟ್ರೇಡ್ ಯೂನಿಯನ್ / ಸಂಸ್ಥೆಗಳಿಗೆ ಧನಸಹಾಯ |
| ಇ) | ಕಾರ್ಮಿಕ ಇಲಾಖೆಯಲ್ಲಿ ನೋಂದಾಯಿಸದೇ ಇರುವ ಕಾರ್ಮಿಕರು ಸರ್ಕಾರಿ ಸವಲತ್ತುಗಳಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಹಾಗೂ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ವತಿಯಿಂದ ನೀಡಲಾಗುವ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಫಲಾನುಭವಿಗಳನ್ನು ನಿಯಮಾನುಸಾರ ನೋಂದಾಯಿಸಲಾಗುತ್ತಿದ್ದು: ನೋಂದಣಿಯಾಗದಿರುವ ಫಲಾನುಭವಿಗಳು ಮಂಡಳಿಯ ಸೌಲಭ್ಯಗಳಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಈ) | ಹಾಗಿದ್ದಲ್ಲಿ ಇಂತಹ ಕಾರ್ಮಿಕರನ್ನು ನೋಂದಾಯಿಸಿ ಸವಲತ್ತುಗಳನ್ನು ಒದಗಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ನೀಡುವ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಫಲಾನುಭವಿಗಳನ್ನು ನಿಯಮಾನುಸಾರ ನೋಂದಾಯಿಸಲಾಗುತ್ತಿದೆ. ನೋಂದಣಿಯಾಗದ ಕಾರ್ಮಿಕರು ಮಂಡಳಿಗಳು ನೀಡುವ ಸೌಲಭ್ಯಗಳಿಂದ ವಂಚಿತರಾಗುವುದನ್ನು ಅರಿತ ಸರ್ಕಾರ ಹಾಗೂ ಮಂಡಳಿಗಳು ಸಂಬಂಧಿಸಿದ ಕಾರ್ಮಿಕರಿಗೆ ಸೌಲಭ್ಯಗಳ ಕುರಿತು ಅರಿವು ಮೂಡಿಸಲು ಹಲವಾರು ಕ್ರಮಗಳನ್ನು ಕೈಗೊಂಡಿರುತ್ತದೆ.<br>• ಕಾನೂನು ಸೇವೆಗಳ ಪ್ರಾಧಿಕಾರದೊಂದಿಗೆ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಕಟ್ಟಡ ಕಾರ್ಮಿಕರ ನೋಂದಣಿ ಹಾಗೂ ಮಂಡಳಿಯ ಸೌಲಭ್ಯಗಳ ಬಗ್ಗೆ ಜಾಗೃತಿ ಮೂಡಿಸಲಾಗುತ್ತಿದೆ.<br>• ರಾಜ್ಯದಾದ್ಯಂತ ಇರುವ ಜಿಲ್ಲಾಧಿಕಾರಿಗಳ ಕಛೇರಿ, ಜಿಲ್ಲಾ ಪಂಚಾಯತ್ ಕಛೇರಿಗಳು, ತಾಲ್ಲೂಕು ಕಛೇರಿಗಳು ಮತ್ತು ಸ್ವಂತ ಕಟ್ಟಡ ಹೊಂದಿರುವ ಕಾರ್ಮಿಕ ಇಲಾಖೆಯ ಕಛೇರಿಗಳಲ್ಲಿ ಹೋರ್ಡಿಂಗ್‌ಗಳನ್ನು ಅಳವಡಿಸುವ ಮೂಲಕ ಈಗಾಗಲೇ ಪ್ರಚಾರವನ್ನು ಕೈಗೊಳ್ಳಲಾಗಿದೆ.<br>• ಜನ ಪ್ರತಿನಿಧಿಗಳು ಮತ್ತು ಕಾರ್ಮಿಕ ಸಂಘಟನೆಗಳ ಮೂಲಕವು ನೋಂದಣಿ ಹಾಗೂ ಮಂಡಳಿಯ ಸೌಲಭ್ಯಗಳ ಬಗ್ಗೆ ವ್ಯಾಪಕ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾದಗುತ್ತಿದೆ.<br>• 2017–18ನೇ ಸಾಲಿನ ಆಯವ್ಯಯದಲ್ಲಿ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್ ಹಾಗೂ ಮೆಕ್ಯಾನಿಕ್‌ಗಳಿಗೆ 10 ಕೋಟಿ ರೂ. ವೆಚ್ಚದಲ್ಲಿ ಸ್ಮಾರ್ಟ್ ಕಾರ್ಡ್ ಒದಗಿಸುವ ಮೂಲಕ "ಅಪಘಾತ ಪರಿಹಾರ ಯೋಜನೆ" ಹಾಗೂ "ಭವಿಷ್ಯನಿಧಿ ಪಿಂಚಣಿ"ಯ ಅನುಕೂಲ" ಒದಗಿಸುವುದಾಗಿ ಎಂದು ಘೋಷಿಸಿದೆ. ಈ ಸಂಬಂಧ 2 ಲಕ್ಷ ಅರ್ಜಿಗಳನ್ನು ರಾಜ್ಯದ ಎಲ್ಲಾ ಜಿಲ್ಲೆಗಳ ಕಾರ್ಮಿಕ ಇಲಾಖೆಯ ಕಛೇರಿಗಳಿಗೆ ಹಾಗೂ ಮೇಲಿನ 5 ವಲಯಗಳಿಗೆ ಸಂಬಂಧಿಸಿದ ಸಂಘಟನೆಗಳಿಗೆ ವಿತರಿಸಲಾಗಿದ್ದು, ಭರ್ತಿಯಾದ ಅರ್ಜಿಗಳು ಬಂದಂತೆ ಕಾರ್ಮಿಕರನ್ನು ನೋಂದಾಯಿಸಿ ಅವರಿಗೆ ಗುರುತಿನ ಚೀಟಿ (ಸ್ಮಾರ್ಟ್‌ಕಾರ್ಡ್) ನೀಡಲಾಗುವುದು. |

| | | |
|---|---|---|
| | | • 2018-19ನೇ ಸಾಲಿನ ಆಯವ್ಯಯದಲ್ಲಿ ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕರಿಗೂ ಸಹ ***"ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"***ಯಡಿ ಸ್ಮಾರ್ಟ್ ಕಾರ್ಡ್ ವಿತರಿಸುವ ಜೊತೆಗೆ ವಂತಿಕೆ ಆಧಾರಿತ ಪಿಂಚಣಿ ಯೋಜನೆಯನ್ನು ರೂ. 25 ಕೋಟಿಗಳ ವೆಚ್ಚದಲ್ಲಿ ಜಾರಿಗೊಳಿಸುವುದಾಗಿ ಘೋಷಿಸಿರುತ್ತಾರೆ. ಈ ಕುರಿತು ಅಗತ್ಯ ಕ್ರಮಕೈಗೊಳ್ಳಲಾಗುತ್ತಿದೆ.<br>• ಕಾರ್ಮಿಕ ಇಲಾಖೆ ಹಾಗೂ ಇಲಾಖೆ ಅಧೀನದಲ್ಲಿ ಬರುವ ಮಂಡಳಿಗಳ ವತಿಯಿಂದ ರಾಜ್ಯದ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರಿಗೆ ನೀಡಲಾಗುವ ಸೌಲಭ್ಯಗಳ ಕುರಿತಾಗಿ ಮಾಹಿತಿ ನೀಡುವ ಸಲುವಾಗಿ ***ಕಾರ್ಮಿಕ ಚೈತನ್ಯ ವಾಹಿನಿ-1*** ಎಂಬ ಶೀರ್ಷಿಕೆಯಡಿ ಐಇಸಿ ಕಾರ್ಯಕ್ರಮವನ್ನು ರಾಜ್ಯದ 17 ಜಿಲ್ಲೆಗಳಲ್ಲಿ ಹಮ್ಮಿಕೊಂಡು ವ್ಯಾಪಕ ಪ್ರಚಾರ ಕಾರ್ಯಕ್ರಮ ನಡೆಸಲಾಗಿರುತ್ತದೆ. |

**ಕಾಇ 247 ಎಲ್‌ಇಟಿ 2018**

(ವೆಂಕಟರಮಣಪ್ಪ)
**ಕಾರ್ಮಿಕ ಸಚಿವರು**

# ಅನುಬಂಧ

## ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.1,000/-
2. **ದುರ್ಬಲತೆ ಪಿಂಚಣಿ:** ಫಲಾನುಭವಿಗೆ ಖಾಯಿಲೆಗಳಿಂದ ಹಾಗೂ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.1,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ. 2,00,000/-**ದವರೆಗೆ ಅನುಗ್ರಹ ರಾಶಿ ಸಹಾಯಧನ.
3. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) :** ರೂ.20,000/-ವರೆಗೆ
4. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ):** ರೂ.2,00,000/-ದವರೆಗೆ ಮುಂಗಡ ಸೌಲಭ್ಯ
5. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
6. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಎಕ್ಸ್‌ಗ್ರೇಷಿಯಾ **ರೂ.50,000/-**ಸಹಾಯಧನ
7. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**
   - i) 1, 2 ಹಾಗೂ 3ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 2,000/-**
   - ii) 4, 5 ಹಾಗೂ 6ನೇ ತರಗತಿಯಲ್ಲಿ ಉತ್ತೀರ್ಣರಾದವರಿಗೆ **ರೂ. 3,000/-**
   - iii) 7 ಹಾಗೂ 8ನೇ ತರಗತಿ ಉತ್ತೀರ್ಣರಾದವರಿಗೆ **ರೂ. 4,000/-**
   - iv) 9, 10 ನೇ ತರಗತಿ ಹಾಗೂ ಪ್ರಥಮ ಪಿಯುಸಿಉತ್ತೀರ್ಣರಾದವರಿಗೆ **6,000/-**
   - v) ದ್ವಿತೀಯ ಪಿ.ಯು.ಸಿ ಉತ್ತೀರ್ಣರಾದವರಿಗೆ **ರೂ. 8,000/-**
   - vi) ಐಟಿಐ ಮತ್ತು ಡಿಪ್ಲೋಮಾ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 7,000/-**
   - vii) ಪದವಿ ಉತ್ತೀರ್ಣರಾದವರಿಗೆ ಪ್ರತಿ ವರ್ಷಕ್ಕೆ **ರೂ. 10,000/-**
   - viii) ಸ್ನಾತಕೋತ್ತರ ಪದವಿ ಸೇರ್ಪಡೆಗೆ **ರೂ. 20,000/-** ಹಾಗೂ ಪ್ರತಿ ವರ್ಷ **ರೂ.10,000/-**ಗಳಂತೆ (ಎರಡು ವರ್ಷಗಳಿಗೆ)
   - ix) ಇಂಜಿನಿಯರಿಂಗ್ ಕೋರ್ಸ್‌ಗೆ ಸೇರ್ಪಡೆಗೆ **ರೂ.25,000/-** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.20,000/-**
   - x) ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ **ರೂ.30,000/-** ಹಾಗೂ ಪ್ರತಿ ವರ್ಷ ತೇರ್ಗಡೆಗೆ **ರೂ.25,000/-**
   - xi) ಪಿಹೆಚ್‌ಡಿ ಕೋರ್ಸ್‌ಗೆ ಪ್ರತಿ ವರ್ಷಕ್ಕೆ **ರೂ.20,000/-** (ಗರಿಷ್ಠ ಎರಡು ವರ್ಷಗಳು) ಮತ್ತು ಪಿಹೆಚ್‌ಡಿ ಪ್ರಬಂಧ ಸ್ವೀಕಾರದ ನಂತರ ಹೆಚ್ಚುವರಿಯಾಗಿ **ರೂ.20,000/-**

**ಪ್ರತಿಭಾವಂತ ಮಕ್ಕಳಿಗಾಗಿ:**

(a) ಎಸ್.ಎಸ್‌ಎಲ್.ಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.5,000/-**

(b) ಪಿಯುಸಿ ಅಥವಾ ತತ್ಸಮಾನ ತರಗತಿಯಲ್ಲಿ ಶೇ.75 ಅಂಕ ಪಡೆದವರಿಗೆ **ರೂ.7,000/-**

(c) ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ **ರೂ.10,000/-**

(d) ಸ್ನಾತಕೋತ್ತರ ಪದವಿ ಅಥವಾ ತತ್ಸಮಾನ ಕೋರ್ಸ್‌ನಲ್ಲಿ ಶೇ.75 ಅಂಕ ಪಡೆದವರಿಗೆ **ರೂ.15,000/-**

8. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-ವರೆಗೆ**

9. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-,** ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ. 2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**

10. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಸಾಮಾನ್ಯ ಶಸ್ತ್ರಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ

11. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**

12. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್ ಮತ್ತು ಪ್ರತಿ ಮೂರು ತಿಂಗಳಿಗೆ ಒಮ್ಮೆ ಸಿಲಿಂಡರ್ ರೀಫಿಲ್

13. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ

14. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ

15. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/-ಗಳ ಸಹಾಯಧನ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 155
ಸದಸ್ಯರ ಹೆಸರು : ಶ್ರೀ.ಟಿ.ವೆಂಕಟರಮಣಯ್ಯ(ದೊಡ್ಡಬಳ್ಳಾಪುರ)
ಉತ್ತರಿಸುವ ಸಚಿವರು : ಮಾನ್ಯ ಸಣ್ಣ ಕೈಗಾರಿಕೆ ಸಚಿವರು.
ಉತ್ತರಿಸುವ ದಿನಾಂಕ : 09.07.2018.

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ದೊಡ್ಡಬಳ್ಳಾಪುರ ಮತಕ್ಷೇತ್ರದಲ್ಲಿ 2 ಲಕ್ಷ ಜನಸಂಖ್ಯೆ ಇದ್ದು, ನಿರುದ್ಯೋಗಿ ಪದವೀಧರರಿಗೆ ಉದ್ಯೋಗವನ್ನು ಕಲ್ಪಿಸಲು ಸಣ್ಣ ಕೈಗಾರಿಕೆಗಳನ್ನು ಹೆಚ್ಚು ಹೆಚ್ಚು ಸ್ಥಾಪಿಸುವ ಯೋಜನೆ ಸರಕಾರದ ಮುಂದಿದೆಯೇ, | ದೊಡ್ಡಬಳ್ಳಾಪುರ ಮತ ಕ್ಷೇತ್ರವು ಒಳಗೊಂಡಂತೆ ರಾಜ್ಯದ ನಿರುದ್ಯೋಗಿ ಪದವೀಧರರಿಗೆ ಉದ್ಯೋಗವನ್ನು ಕಲ್ಪಿಸಲು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ನಿರಂತರವಾಗಿ ಅನೇಕ ಕಾಯಕ್ರಮಗಳನ್ನು ಹಮ್ಮಿಕೊಂಡಿದ್ದು ಅವು ಈ ಕೆಳಗಿನಂತಿವೆ.<br><br>1. ಕರ್ನಾಟಕ ಸರ್ಕಾರದ ಮುಖ್ಯಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಟ ಯೋಜನಾ ವೆಚ್ಚ ರೂ. 10 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 25 ರಿಂದ ಶೇ.35 ರವರೆಗೆ ಗರಿಷ್ಟ ರೂ.2.50 ಲಕ್ಷದಿಂದ ರೂ.3.50 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>2. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಉತ್ಪಾದನಾ ಚಟುವಟಿಕೆಗೆ ಗರಿಷ್ಟ ಯೋಜನಾ ವೆಚ್ಚ ರೂ. 25 ಲಕ್ಷಗಳವರೆಗೆ ಮತ್ತು ಸೇವಾ ಚಟುವಟಿಕೆಗೆ ಗರಿಷ್ಟ ಯೋಜನಾ ವೆಚ್ಚ ರೂ. 10 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಟ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>3. ನಿರುದ್ಯೋಗಿ ಯುವಕ ಯುವತಿಯರಿಗೆ ಉದ್ಯಮಶೀಲರಾಗಲು ಉದ್ಯಮಶೀಲತಾ ಅಭಿವೃದ್ಧಿ ಕಾರ್ಯಕ್ರಮ, ಉದ್ಯಮಶೀಲತಾ ಪ್ರೇರಣಾ ಶಿಬಿರ, ಕೊಳ್ಳುವವರ ಮತ್ತು ಮಾರಾಟಗಾರರ ಸಮಾವೇಶ ಮತ್ತು ಕಲಾವೈಭವ ವಸ್ತು ಪ್ರದರ್ಶನಗಳನ್ನು ನಡೆಸಲಾಗುತ್ತಿದೆ.<br><br>4. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಮಹಿಳಾ ಉದ್ದಿಮೆದಾರರಿಗೆ ಶೇಕಡ 4 ರ ಬಡ್ಡಿ ದರದಲ್ಲಿ ರೂ.2.00 ಕೋಟಿಯವರೆಗೂ ಸಾಲ ಸೌಲಭ್ಯ ಒದಗಿಸಲಾಗುವುದು. |

| | | |
|---|---|---|
| | | 5. ನಗರ ಮತ್ತು ಗ್ರಾಮೀಣ ಪ್ರದೇಶದ ಕುಶಲಕರ್ಮಿಗಳಿಗೆ ತಮ್ಮ ಉದ್ಯೋಗವನ್ನು ಮುಂದುವರೆಸಿಕೊಂಡು ಹೋಗಲು ರೂ.2.50 ಲಕ್ಷದಲ್ಲಿ ವಸತಿ ಕಾರ್ಯಗಾರಗಳನ್ನು, ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮದಿಂದ ನಿರ್ಮಿಸಿಕೊಡಲಾಗುತ್ತಿದೆ.<br><br>6. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 50 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಟ 2 ಎಕರೆ) ಮತ್ತು ಶೇ 90 ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>7. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಶೇ 60 ರಷ್ಟು ಸಹಾಯಧನ ನೀಡಲಾಗುತ್ತಿದೆ.<br><br>8. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ/ ಆಧುನೀಕರಣ/ ತಾಂತ್ರಿಕ ಉನ್ನತೀಕರಣ/ ವಿಸ್ತರಣೆ/ ಚಟುವಟಿಕೆ ಬದಲಾವಣೆ ಘಟಕಗಳಿಗೆ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿ ರಹಿತ ಗರಿಷ್ಟ ರೂ.75 ಲಕ್ಷದವರೆಗೆ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುವುದು.<br><br>9. ದಿನಾಂಕ:01-04-2017 ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳು ಸಾಲ ಪಡೆಯುವ ಸಂದರ್ಭದಲ್ಲಿ ಕೆಎಸ್.ಎಫ್ ಸಿ ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸುವ ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಭರಿಸುವುದು.<br><br>10. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಗಳು ದಿನಾಂಕ:01-04-2017 ರಿಂದ ಪ್ರಾರಂಭವಾಗಿರುವ ಹೊಸ ಸಣ್ಣ ಮತ್ತು ಅತೀ ಸಣ್ಣ ಕೈಗಾರಿಕಾ ಘಟಕಗಳಿಗೆ ಮೊದಲ 5 ವರ್ಷಗಳ ಅವಧಿಗೆ ಪ್ರತಿ ಯುನಿಟ್‌ಗೆ 2 ರೂ.ಗಳಷ್ಟು ವಿದ್ಯುಚ್ಛಕ್ತಿ ಸಹಾಯಧನ ನೀಡಲಾಗುತ್ತಿದೆ.<br><br>11. ಖಾದಿ ಸಂಘ ಸಂಸ್ಥೆಗಳು ಉತ್ಪಾದಿಸುತ್ತಿರುವ ಖಾದಿ ಉತ್ಪನ್ನಗಳಿಗೆ ಹೆಚ್ಚಿನ ಮಾರುಕಟ್ಟೆ ಒದಗಿಸುವ ದೃಷ್ಟಿಯಿಂದ ಹಾಗೂ ಕಸುಬುದಾರರಿಗೆ ನಿರಂತರ ಉದ್ಯೋಗವಕಾಶ ನೀಡುವ ದೃಷ್ಟಿಯಿಂದ ಪ್ರೋತ್ಸಾಹ ಮಜೂರಿ ಅನುದಾನವನ್ನು ಖಾದಿ ಸಂಘ:ಸಂಸ್ಥೆಗಳಲ್ಲಿ ದುಡಿಯುತ್ತಿರುವ ನೂಲುಗಾರರು, ನೇಕಾರರು ಹಾಗೂ ಖಾದಿ ಕಾರ್ಯಕರ್ತರಿಗೆ ನೀಡಲಾಗುತ್ತಿದೆ. |

| | | |
|---|---|---|
| | | 12. ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಕರ್ನಾಟಕ ಸರ್ಕಾರವು ಕೈಗಾರಿಕಾ ನೀತಿ 2014-19 ನ್ನು ಜಾರಿಗೆ ತಂದಿದ್ದು ತಾಲ್ಲೂಕುಗಳನ್ನು ಹೈದ್ರಾಬಾದ್-ಕರ್ನಾಟಕ ಮತ್ತು ಹೈದ್ರಾಬಾದ್-ಕರ್ನಾಟಕೇತರ ತಾಲ್ಲೂಕುಗಳೆಂದು ಮತ್ತು ಕೈಗಾರಿಕೆಗಳ ಸಾಂದ್ರತೆ ಮೇಲೆ 4 ವಲಯಗಳಾಗಿ ವಿಂಗಡಿಸಿದ್ದು ವಲಯಗಳ ಆಧಾರದ ಮೇಲೆ, ಉದ್ಯಮಶೀಲರ ವರ್ಗದ ಮೇಲೆ, ಚಟುವಟಿಕೆಯನ್ನು ಆಧರಿಸಿ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.<br>• ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ.<br>• ಬಂಡವಾಳ ಹೂಡಿಕೆ ಸಹಾಯಧನ<br>• ಬಡ್ಡಿ ಸಹಾಯಧನ<br>• ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>• ಪ್ರವೇಶ ತೆರಿಗೆ ವಿನಾಯಿತಿ.<br>• ರಫ್ತು ಆಧಾರಿತ ಘಟಕಗಳಿಗೆ ರಿಯಾಯಿತಿ.<br>• ಕೃಷಿ ಉತ್ಪನ್ನ ಮಾರುಕಟ್ಟೆ ತೆರಿಗೆಯಿಂದ ವಿನಾಯಿತಿ.<br>• ತ್ಯಾಜ್ಯ ಸಂಸ್ಕರಣಾ ಯಂತ್ರ ಸ್ಥಾಪನೆಗೆ ಸಹಾಯಧನ.<br>• ವಿದ್ಯುತ್ ತೆರಿಗೆ ವಿನಾಯಿತಿ<br>• ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ & ಪೇಟೆಂಟ್ ನೋಂದಣಿ ಸಹಾಯಧನ<br>• ಮಳೆ ನೀರು ಕೊಯ್ಲು / ಸಂರಕ್ಷಣೆ ಸಹಾಯಧನ<br>• ಶಕ್ತಿ ಸಂರಕ್ಷಣೆ ಸಹಾಯಧನ<br>• ಯೋಜನಾ ವರದಿ ತಯಾರಿಕಾ ವೆಚ್ಚ ಮರುಪಾವತಿ |
| ಆ | ಹಾಗಿದ್ದಲ್ಲಿ, ಈ ಬಗ್ಗೆ ಸರಕಾರ ಕೈಗೊಂಡಿರುವ ಕ್ರಮಗಳೇನು? | ದೊಡ್ಡಬಳ್ಳಾಪುರ ವಿಧಾನಸಭಾ ಕ್ಷೇತ್ರದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಒಬೇದನಹಳ್ಳಿ, ಬ್ಯಾಸೆಟ್ಟಿಹಳ್ಳಿಗಳಲ್ಲಿ ಒಟ್ಟು 1499 ಎಕರೆಗಳಲ್ಲಿ ಕೈಗಾರಿಕಾ ಪ್ರದೇಶವನ್ನು ಸ್ಥಾಪಿಸಲಾಗಿದೆ.<br>ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮದ ವತಿಯಿಂದ ಬ್ಯಾಸೆಟ್ಟಿಹಳ್ಳಿ ಗ್ರಾಮದ ವ್ಯಾಪ್ತಿಯಲ್ಲಿ 20.26 ಎಕರೆ ಪ್ರದೇಶದಲ್ಲಿ 104 ಶೆಡ್‌ಗಳು ಹಾಗೂ 6 ನಿವೇಶನಗಳನ್ನು ಅಭಿವೃದ್ಧಿ ಪಡಿಸಲಾಗಿದೆ. ಇದಲ್ಲದೆ ಆದಿನಾರಾಯಣ ಹೊಸಹಳ್ಳಿ ಗ್ರಾಮದ ವ್ಯಾಪ್ತಿಯಲ್ಲಿ 194 ಎಕರೆ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಪಡಿಸಲು ಅಧಿಸೂಚನೆ ಹೊರಡಿಸಲಾಗಿದೆ.<br>ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಮಾರ್ಚ್ 2018 ರವರೆಗೆ 1879 ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳು ನೋಂದಣಿಯಾಗಿದ್ದು, 15,390 ಜನರಿಗೆ ಉದ್ಯೋಗ ಕಲ್ಪಿಸಿವೆ. |

**ಸಿಐ 52 ಸಪ್ರಕೈ 2018**

(ಎಸ್. ಆರ್. ಶ್ರೀನಿವಾಸ್(ವಾಸು))
ಸಣ್ಣ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಮಾನ್ಯ ಸದಸ್ಯರ ಹೆಸರು | ಶ್ರೀ ಸಿ.ಟಿ. ರವಿ (ಚಿಕ್ಕಮಗಳೂರು) |
| 2. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 73 |
| 3. | ಉತ್ತರಿಸಬೇಕಾದ ದಿನಾಂಕ | 09/07/2018 |
| 4. | ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಂಘಟಿತ ಮತ್ತು ಅಸಂಘಟಿತ ವಲಯದ ಕಾರ್ಮಿಕರ ಸಂಖ್ಯೆ ಎಷ್ಟು?(ತಾಲ್ಲೂಕುವಾರು ವಿವರ ನೀಡುವುದು) | ರಾಜ್ಯದಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರ ಸಂಖ್ಯೆಗೆ ಸಂಬಂಧಿಸಿದಂತೆ 2011ರಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಭಾರತ ಸರ್ಕಾರ ಇವರು ಕೈಗೊಂಡ ಸಾಮಾಜಿಕ, ಆರ್ಥಿಕ ಮತ್ತು ಜಾತಿ ಜನಗಣತಿ ಪ್ರಕಾರ ರಾಜ್ಯದಲ್ಲಿ 132 ಲಕ್ಷ ಅಸಂಘಟಿತ ಕಾರ್ಮಿಕರು ಇರುವುದಾಗಿ ತಿಳಿಸಲಾಗಿದ್ದು, ಕಾರ್ಮಿಕ ಇಲಾಖೆ ವತಿಯಿಂದ ಯಾವುದೇ ಸಮೀಕ್ಷೆಯನ್ನು ನಡೆಸಿರುವುದಿಲ್ಲ. ಆದರೆ, ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರಿಗೆ ನೀಡಲಾಗುವ ವಿವಿಧ ಸೌಲಭ್ಯಗಳಿಗೆ ಸಂಬಂಧಿಸಿದಂತೆ ಅರ್ಹ ಕಾರ್ಮಿಕರನ್ನು ಫಲಾನುಭವಿಗಳಾಗಿ ನೋಂದಣಿ ಮಾಡಿಕೊಳ್ಳಲಾಗುತ್ತಿದೆ. ಅದರಂತೆ, ನೋಂದಣಿಯಾದ ಕಾರ್ಮಿಕರ ಸಂಖ್ಯೆ ಈ ಕೆಳಕಂಡಂತಿದೆ.<br><br>**<u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ</u>**<br>ಈ ಮಂಡಳಿಯಲ್ಲಿ ಕಾರ್ಮಿಕ ಕಲ್ಯಾಣ ನಿಧಿ ಕಾಯ್ದೆ 1965 ಮತ್ತು ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ನಿಯಮಾವಳಿ 1968 ರನ್ವಯ ನೋಂದಾಯಿತ 50 ಕ್ಕಿಂತ ಹೆಚ್ಚು ಕಾರ್ಮಿಕರನ್ನೊಳಗೊಂಡ ಕಾರ್ಖಾನೆಗಳು ಮತ್ತು ಸಂಸ್ಥೆಗಳು ಪ್ರತಿಯೊಬ್ಬ ಕಾರ್ಮಿಕರಿಗೆ ತಲಾ ರೂ.20/- ರಂತೆ ವಂತಿಗೆಯನ್ನು ವೇತನದಲ್ಲಿ ಕಟಾಯಿಸಿ ಅದಕ್ಕೆ ಮಾಲೀಕರು ರೂ.40/-ರ ವಂತಿಗೆ ಸೇರಿದಂತೆ ಒಟ್ಟು ರೂ.60/- ಗಳನ್ನು ಕಲ್ಯಾಣ ನಿಧಿಗೆ ವರ್ಷಕ್ಕೊಮ್ಮೆ ಪಾವತಿ ಮಾಡಬೇಕಾಗಿರುತ್ತದೆ. ಇದರ ಜೊತೆಗೆ ಸರ್ಕಾರದಿಂದ ರೂ.20/-ರ ಸಮಾನಾಂತರ ವಂತಿಗೆಯನ್ನು ಪಾವತಿ ಮಾಡಲಾಗುತ್ತದೆ. ಅದರಂತೆ, ವಂತಿಗೆ ಪಾವತಿ ಮಾಡುವ 34.38ಲಕ್ಷ ಸಂಘಟಿತ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿರುತ್ತಾರೆ.<br><br>**<u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-</u>**<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಅಸಂಘಟಿತ ವಲಯಕ್ಕೆ ಸೇರಿದ ಕಾರ್ಮಿಕರಾಗಿದ್ದು, ಸದರಿ ಕಾರ್ಮಿಕರಿಗೆ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ನೀಡಲಾಗುವ ವಿವಿಧ ಸಾಮಾಜಿಕ ಮತ್ತು ಆರ್ಥಿಕ |

| | | |
|---|---|---|
| | | ಸೌಲಭ್ಯಗಳಡಿ ಫಲಾನುಭವಿಗಳಾಗಿ ಒಟ್ಟು 13.60 ಲಕ್ಷ ಕಾರ್ಮಿಕರನ್ನು ನೋಂದಣಿ ಮಾಡಿಕೊಳ್ಳಲಾಗಿದ್ದು, ನೋಂದಣಿಯಾದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ತಾಲ್ಲೂಕುವಾರು ವಿವರವನ್ನು **ಅನುಬಂಧ-1** ರಲ್ಲಿ ಒದಗಿಸಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br>ಈ ಮಂಡಳಿವತಿಯಿಂದ ರಾಜ್ಯದಲ್ಲಿ ಈವರೆಗೆ ಅಸಂಘಟಿತ ಕಾರ್ಮಿಕರ ಪ್ರತ್ಯೇಕವಾದ ಗಣತಿ / ಸಮೀಕ್ಷೆ ಕಾರ್ಯ ನಡೆಸಿರುವುದಿಲ್ಲ. ಆದರೆ, ಮಂಡಳಿ ವತಿಯಿಂದ ಅಸಂಘಟಿತ ಕಾರ್ಮಿಕರಿಗಾಗಿ ಜಾರಿಗೊಳಿಸಲಾಗಿರುವ ವಿವಿಧ ಯೋಜನೆಗಳಡಿ ಅರ್ಹ ಕಾರ್ಮಿಕರನ್ನು ಫಲಾನುಭವಿಗಳಾಗಿ ನೋಂದಣಿ ಮಾಡಿಕೊಳ್ಳಲಾಗಿದ್ದು, ಅದರನ್ವಯ ಮಂಡಳಿಯಲ್ಲಿ ಲಭ್ಯವಿರುವ ಕಾರ್ಮಿಕರ ಸಂಖ್ಯೆ ಈ ಕೆಳಕಂಡಂತಿದ್ದು, ತಾಲ್ಲೂಕುವಾರು ಮಾಹಿತಿ ಲಭ್ಯವಿರುವುದಿಲ್ಲ.<br>1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯ ಫಲಾನುಭವಿಗಳ ಸಂಖ್ಯೆ: 10,32,206<br>2) ಎನ್.ಪಿ.ಎಸ್.ಲೈಟ್- ಸ್ವಾವಲಂಬನ್ ಪಿಂಚಣಿ ಯೋಜನೆ ಫಲಾನುಭವಿಗಳ ಸಂಖ್ಯೆ : 50,666 |
| ಆ) | ಈ ಕಾರ್ಮಿಕರಿಗೆ ನೀಡುತ್ತಿರುವ ವೇತನ ಹಾಗೂ ಇನ್ನಿತರೆ ಸೌಲಭ್ಯಗಳೇನು. | ರಾಜ್ಯದಲ್ಲಿ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರು ಸೇರಿದಂತೆ ಕನಿಷ್ಠ ವೇತನ ಕಾಯ್ದೆ, 1948 ಹಾಗೂ ಕರ್ನಾಟಕ ನಿಯಮಾವಳಿ 1958 ರನ್ವಯ 82 ಅನುಸೂಚಿತ ಉದ್ದಿಮೆಗಳಿಗೆ ಕನಿಷ್ಠ ವೇತನವನ್ನು ನಿಗದಿಪಡಿಸಿದ್ದು, ಸದರಿ ವೇತನ ದರದನ್ವಯ ಅರ್ಹ ಕಾರ್ಮಿಕರಿಗೆ ವೇತನವನ್ನು ಪಾವತಿಸುವುದು ಹಾಗೂ ವೇತನ ಪಾವತಿ ಕಾಯ್ದೆ, 1936 ಹಾಗೂ ಅದರಡಿಯ ಕರ್ನಾಟಕ ನಿಯಮಾವಳಿಗಳನ್ವಯ ಸಕಾಲದಲ್ಲಿ ಹಾಗೂ ಕಾನೂನು ಬಾಹಿರವಾದ ಕಡಿತಗಳಿಲ್ಲದೇ ವೇತನವನ್ನು ದುಡಿದ ಕಾರ್ಮಿಕರಿಗೆ ಪಾವತಿಸಲು ಹಾಗೂ ನಿಯಮಾನುಸಾರ ಕಾರ್ಯ ಸ್ಥಳಗಳಲ್ಲಿ ಸೌಲಭ್ಯಗಳನ್ನು ಒದಗಿಸಲು ಉದ್ಯೋಗದಾತರು ಬಾಧ್ಯಸ್ಥರಾಗಿರುತ್ತಾರೆ.<br><br>ಇದಲ್ಲದೇ, ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರಿಗೆ ವಿವಿಧ ಸಾಮಾಜಿಕ ಮತ್ತು ಆರ್ಥಿಕ ಸೌಲಭ್ಯಗಳು ನೀಡಲಾಗುತ್ತಿದ್ದು, ವಿವರ ಕೆಳಕಂಡಂತಿದೆ.<br><br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**<br>ಈ ಮಂಡಳಿ ವತಿಯಿಂದ ಸಂಘಟಿತ ಕಾರ್ಮಿಕರಿಗೆ ಈ ಕೆಳಕಂಡ ಪ್ರಮುಖ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>1. ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ.<br>2. ಕಾರ್ಮಿಕರಿಗೆ ವೈದ್ಯಕೀಯ ನೆರವು.<br>3. ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ. |

| | | |
|---|---|---|
| | | ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ಗರಿಷ್ಠ ರೂ. 50,000/- ರವರೆಗೆ ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಹಾಗೂ<br>➢ 15 ದಿನಗಳಿಗಿಂತ ಹೆಚ್ಚು ದಿನ ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ, ಗರಿಷ್ಠ ರೂ. 1.00 ಲಕ್ಷದ ವರೆಗೆ ಅಥವಾ ನಿಖರ ಆಸ್ಪತ್ರೆ ವೆಚ್ಚ, ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಮರುಪಾವತಿ ಪಡೆಯಬಹುದು.<br>**(2) <u>ಅಪಘಾತ ಜೀವ ರಕ್ಷಕ ಯೋಜನೆ:-</u>**<br>ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ವಾಹನ ಚಾಲಕರ ಅಪಘಾತ ಪರಿಹಾರ ಯೋಜನೆಯಡಿ ನೋಂದಾಯಿತ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಿ, ಅವರನ್ನು ಅಪಘಾತ ಜೀವ ರಕ್ಷಕರನ್ನಾಗಿ ಸಜ್ಜುಗೊಳಿಸಿ ಅಪಘಾತಕ್ಕೊಳಗಾದ ಸಂತ್ರಸ್ತರಿಗೆ ಕೂಡಲೇ ಪ್ರಥಮ ಚಿಕಿತ್ಸೆಯನ್ನು ನೀಡಿ, ಹತ್ತಿರದ ಆಸ್ಪತ್ರೆಗೆ ಸೇರಿಸಿ, ಸಂಬಂಧಪಟ್ಟ ಪೋಲಿಸ್ ಠಾಣೆಗೆ ಮಾಹಿತಿ ನೀಡಿ, ಆ ಮೂಲಕ ಗಾಯಾಳುವಿನ ಪ್ರಾಣ ರಕ್ಷಣೆಯನ್ನು ಮಾಡುವುದನ್ನು ಉತ್ತೇಜಿಸುವ ದೃಷ್ಟಿಯಿಂದ ಕರ್ನಾಟಕ ಸರ್ಕಾರವು 2016-17ನೇ ಸಾಲಿನಲ್ಲಿ **"ಅಪಘಾತ ಜೀವ ರಕ್ಷಕ ಯೋಜನೆ"**ಯನ್ನು ಜಾರಿಗೊಳಿಸುತ್ತಿದೆ.<br>**ಪ್ರೋತ್ಸಾಹಧನ:-**<br>ಅಪಘಾತಕ್ಕೊಳಗಾದ ಸಂತ್ರಸ್ತರನ್ನು ರಕ್ಷಿಸಿದ ಜೀವ ರಕ್ಷಕರಿಗೆ ರೂ.1,000/ಗಳ ಪ್ರೋತ್ಸಾಹ ಧನವನ್ನು ನೀಡಲಾಗುವುದು.<br>**(3) <u>ಎನ್.ಪಿ.ಎಸ್.ಲೈಟ್-ಸ್ವಾವಲಂಭನ್ ಯೋಜನೆ:-</u>**<br>ಅಸಂಘಟಿತ ಕಾರ್ಮಿಕರಿಗೆ ಪಿಂಚಣಿಯ ಸೌಲಭ್ಯ ಒದಗಿಸುವ ಉದ್ದೇಶದ ಈ ಯೋಜನೆಯನ್ನು, ಕೇಂದ್ರ ಸರ್ಕಾರವು 'ಅಟಲ್ ಪಿಂಚಣಿ' ಯೋಜನೆಯನ್ನು ಜಾರಿಗೆ ತಂದಿರುವುದರಿಂದ, ಕೇಂದ್ರ ಸರ್ಕಾರದ ಪಿಂಚಣಿ ನಿಧಿ ನಿಯಂತ್ರಣ ಅಭಿವೃದ್ಧಿ ಪ್ರಾಧಿಕಾರ(ಪಿ.ಎಫ್.ಆರ್.ಡಿ.ಎ.)ದ ಸೂಚನೆಯನ್ವಯ ದಿನಾಂಕ: 01-04-2015ರಿಂದ ಅನ್ವಯವಾಗುವಂತೆ ಎನ್.ಪಿ.ಎಸ್ ಲೈಟ್-ಸ್ವಾವಲಂಭನ್ ಪಿಂಚಣಿ ಯೋಜನೆಯಡಿ ಹೊಸ ನೋಂದಣಿಯನ್ನು ಸ್ಥಗಿತಗೊಳಿಸಲಾಗಿದೆ. |
| ಇ) | ಈ ಕಾರ್ಮಿಕರು ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಪ್ರತಿಭಟನೆ ನಡೆಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ ಇವರ ಬೇಡಿಕೆಗಳೇನು. | ಕಾರ್ಮಿಕರು ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಪ್ರತಿಭಟನೆ ನಡೆಸಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>➢ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ವತಿಯಿಂದ ನೀಡಲಾಗುವ ಸೌಲಭ್ಯಗಳ ಕುರಿತಾಗಿ ಅಸಂಘಟಿತ ವಲಯದ ಕಾರ್ಮಿಕರು ತಮ್ಮ ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಕೋರಿ ಸಲ್ಲಿಸಿರುವ ಮನವಿಗಳ ಕುರಿತು ವಿವರವನ್ನು **<u>ಅನುಬಂಧ - 3</u>** ರಲ್ಲಿ ಒದಗಿಸಿದೆ. |

| | | |
|---|---|---|
| | | 4. ವಾರ್ಷಿಕ ಕ್ರೀಡಾ ಚಟುವಟಿಕೆ ಹಮ್ಮಿಕೊಳ್ಳುವ ನೋಂದಾಯಿತ ಕಾರ್ಮಿಕ ಸಂಘಗಳಿಗೆ ಧನ ಸಹಾಯ.<br>5. ವಾರ್ಷಿಕ ವೈದ್ಯಕೀಯ ತಪಾಸಣೆಯನ್ನು ನಡೆಸುವ ಟ್ರೇಡ್ ಯೂನಿಯನ್ / ಸಂಸ್ಥೆಗಳಿಗೆ ಧನ ಸಹಾಯ.<br><br>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:-**<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಅಸಂಘಟಿತ ವಲಯಕ್ಕೆ ಸೇರಿದ ಕಾರ್ಮಿಕರಾಗಿದ್ದು, ಅರ್ಹ ಕಾರ್ಮಿಕರನ್ನು ಮಂಡಳಿಯ ಫಲಾನುಭವಿಗಳಾಗಿ ನೋಂದಣಿ ಮಾಡಿಕೊಂಡು ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಆರ್ಥಿಕ ಸೌಲಭ್ಯಗಳನ್ನು ನೀಡಲಾಗುತ್ತಿದೆ. ಅವುಗಳ ವಿವರವನ್ನು ಅನುಬಂಧ-2 ರಲ್ಲಿ ಒದಗಿಸಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br>ಈ ಮಂಡಳಿ ವತಿಯಿಂದ ಅಸಂಘಟಿತ ಕಾರ್ಮಿಕರಿಗೆ ವಿವಿಧ ಸಾಮಾಜಿಕ ಭದ್ರತಾ ಯೋಜನೆಗಳನ್ನು ಜಾರಿಗೊಳಿಸುತ್ತಿದ್ದು, ಸದರಿ ಯೋಜನೆಗಳಡಿ ನೀಡಲಾಗುತ್ತಿರುವ ಸೌಲಭ್ಯಗಳು ಈ ಕೆಳಕಂಡಂತಿವೆ.<br><br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-**<br>ಈ ಯೋಜನೆಯು ದಿನಾಂಕ 01-12-2017 ರಿಂದ ಜಾರಿಗೆ ಬಂದಿದ್ದು, ಸಾರಿಗೆ ಇಲಾಖೆಯಿಂದ ಕರ್ನಾಟಕ ರಾಜ್ಯದಲ್ಲಿ ವಾಣಿಜ್ಯ ಸಾರಿಗೆ ವಾಹನ ಚಾಲನಾ ಪರವಾನಗಿ ಪಡೆದ ಚಾಲಕರು ತಕ್ಷಣದಿಂದ ಫಲಾನುಭವಿಯೆಂದು ಪರಿಗಣಿಸುತ್ತಿದ್ದು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಯೋಜನೆಯಡಿ ನೋಂದಣಾಧಿಕಾರಿಗಳಲ್ಲಿ ನೋಂದಾಯಿಸಲು ಸದ್ಯದಲ್ಲೆ ಅಗತ್ಯ ಕ್ರಮ ಕೈಗೊಳ್ಳಲಾಗುವುದು.<br><br>**ಯೋಜನೆಯ ಸೌಲಭ್ಯಗಳು:**<br>• ಅಪಘಾತದಿಂದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳು ಮರಣ ಹೊಂದಿದಲ್ಲಿ, ಅವರ ನಾಮನಿರ್ದೇಶಿತರಿಗೆ ರೂ.5.00 ಲಕ್ಷ ಪರಿಹಾರ.<br>• ಅಪಘಾತದಿಂದ ಶಾಶ್ವತ ದುರ್ಬಲತೆ ಹೊಂದಿದಾಗ, ಫಲಾನುಭವಿಗೆ ದುರ್ಬಲತೆಯ ಪ್ರಮಾಣಕ್ಕನುಗುಣವಾಗಿ ರೂ.2.00 ಲಕ್ಷದ ವರೆಗೆ ಪರಿಹಾರ.<br>• ಅಪಘಾತದಿಂದ ತಾತ್ಕಾಲಿಕ ದುರ್ಬಲತೆ ಹೊಂದಿದಾಗ-<br>➢ ಅಪಘಾತಕ್ಕೊಳ್ಳಗಾಗಿ ಆಸ್ಪತ್ರೆಯಲ್ಲಿ 15 ದಿನಗಳಿಗಿಂತ ಕಡಿಮೆ ಅವಧಿಗೆ |

| | | |
|---|---|---|
| | | ➢ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಗೆ ಅನೇಕ ಕಾರ್ಮಿಕ ಸಂಘಗಳು ಆಗ್ಗಿಂದಾಗೆ ಬೇಡಿಕೆಗಳನ್ನು ಮುಂದಿಟ್ಟಿದ್ದು, ಅವುಗಳಲ್ಲಿ ಪ್ರಮುಖ ಬೇಡಿಕೆಗಳು ಈ ಕೆಳಕಂಡಂತಿವೆ.<br>1) ಮಂಡಳಿಯಿಂದ ನೋಂದಾಯಿತ ಕಾರ್ಮಿಕರು ಹಾಗೂ ಅವರ ಅವಲಂಬಿತರಿಗೆ ನೀಡಲಾಗುತ್ತಿರುವ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳ ಆರ್ಥಿಕ ಸಹಾಯ ಧನ ಹೆಚ್ಚಳ ಮಾಡುವ ಕುರಿತು.<br>2) ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ನೋಂದಾಯಿತ ಫಲಾನುಭವಿಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳ ವಿಲೇವಾರಿಯಲ್ಲಿನ ವಿಳಂಭವಾಗುತ್ತಿರುವ ಬಗ್ಗೆ.<br>3) ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಅರ್ಹ ಕಾರ್ಮಿಕರ ನೋಂದಣಿ ಪ್ರಕ್ರಿಯೆಯಲ್ಲಿ ಆಗುತ್ತಿರುವ ವಿಳಂಬದ ಬಗ್ಗೆ. |
| ಈ) | ಈ ಬೇಡಿಕೆಗಳನ್ನು ಈಡೇರಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಕಾರ್ಮಿಕ ಸಂಘಟನೆಗಳಿಂದ ಸ್ವೀಕೃತವಾದ ವಿವಿಧ ಬೇಡಿಕೆ/ಮನವಿಗಳಿಗೆ ಸಂಬಂಧಿಸಿದಂತೆ ಕೈಗೊಂಡ ಕ್ರಮಗಳ ಕುರಿತ ವಿವರ ಈ ಕೆಳಕಂಡಂತಿವೆ.<br>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:- ಈ** ಮಂಡಳಿಗೆ ಕಾರ್ಮಿಕರಿಂದ ಸ್ವೀಕೃತವಾಗಿರುವ ವಿವಿಧ ಬೇಡಿಕೆಗಳ ಕುರಿತ ಮನವಿಯಲ್ಲಿನ ಪ್ರಮುಖ ಅಂಶಗಳನ್ನು ಮಂಡಳಿಯ ಸಭೆಯಲ್ಲಿ ಮಂಡಿಸಿ ಕೆಲವು ನಿರ್ಧಾರಗಳನ್ನು ತೆಗೆದುಕೊಳ್ಳಲಾಗಿರುತ್ತದೆ.<br>➢ ಫಲಾನುಭವಿಗಳಿಗೆ ನೀಡಲಾಗುವ ಸೌಲಭ್ಯಗಳ ಆರ್ಥಿಕ ಸಹಾಯ ಧನವನ್ನು ಹೆಚ್ಚಿಸುವ ಸಂಬಂಧ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕರ್ನಾಟಕ ನಿಯಮಾವಳಿ 2006 ರಲ್ಲಿನ ನಿಯಮಗಳಿಗೆ ತಿದ್ದುಪಡಿ ತಂದು ಫಲಾನುಭವಿಗಳಿಗೆ ನೀಡುವ ಸೌಲಭ್ಯಗಳ ಆರ್ಥಿಕ ಸಹಾಯ ಧನದ ಮೊತ್ತವನ್ನು ಹೆಚ್ಚಿಸಲಾಗಿದೆ.<br>➢ ರಾಜ್ಯಾದ್ಯಂತ ಸೌಲಭ್ಯಗಳ ವಿಲೇವಾರಿ ಹಾಗೂ ನೋಂದಣಿ ಪ್ರಕ್ರಿಯೆಯಲ್ಲಿನ ವಿಳಂಬಕ್ಕೆ ಸಂಬಂಧಿಸಿದ ಅಧಿಕಾರಿಗಳಿಗೆ ನಿಯಮಾನುಸಾರ ಸೂಕ್ತ ಕ್ರಮಕೈಗೊಳ್ಳುವಂತೆ ನಿರ್ದೇಶನಗಳನ್ನು ಕಾಲಕಾಲಕ್ಕೆ ನೀಡಲಾಗುತ್ತಿದೆ.<br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:-** ಈ ಮಂಡಳಿಗೆ ನೀಡಿರುವ ವಿವಿಧ ಬೇಡಿಕೆಗಳಿಗೆ ಸಂಬಂಧಿಸಿದಂತೆ ಸರ್ಕಾರವು 2017-18ನೇ ಸಾಲಿನ ಆಯುವ್ಯಯದಲ್ಲಿ ಘೋಷಿಸಿದಂತೆ, ಬೀದಿಬದಿ ವ್ಯಾಪಾರಿಗಳನ್ನು ಹೊರತುಪಡಿಸಿ ಉಳಿದ 5 ವರ್ಗಗಳ ಅಸಂಘಟಿತ ವಲಯದ ಕಾರ್ಮಿಕರನ್ನು ನೋಂದಾಯಿಸಿ |

| | | |
|---|---|---|
| | | "ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ" ಎಂಬ ಏಕ ಶೀರ್ಷಿಕೆ ಮತ್ತು ಏಕ ಚಿಹ್ನೆಯಡಿ ಮೆ॥ ಕಿಯೋನಿಕ್ಸ್ ಸಂಸ್ಥೆಯ ಮೂಲಕ ನೋಂದಾಯಿಸಿ ಸ್ಮಾರ್ಟ್ ಕಾರ್ಡ್‌ಗಳನ್ನು ವಿತರಿಸಲು ಕ್ರಮ ಕೈಗೊಳ್ಳಲಾಗಿದೆ.<br><br>ಮುಂದುವರೆದು, 2018-19ನೇ ಸಾಲಿನ ಆಯವ್ಯಯದಲ್ಲಿ, ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕರಿಗೂ ಸಹ **"ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ"** ಯಡಿ ಸ್ಮಾರ್ಟ್ ಕಾರ್ಡ್ ವಿತರಿಸುವ ಜೊತೆಗೆ ವಂತಿಕೆ ಆಧಾರಿತ ಪಿಂಚಣಿ ಯೋಜನೆಯನ್ನು 25 ಕೋಟಿ ರೂ.ಗಳ ವೆಚ್ಚದಲ್ಲಿ ಜಾರಿಗೊಳಿಸುವುದಾಗಿ ಘೋಷಿಸಲಾಗಿದ್ದು, ಈ ಕುರಿತು ಅಗತ್ಯ ಕ್ರಮ ಕೈಗೊಳ್ಳಲಾಗುತ್ತಿದೆ. |

**ಕಾಇ 246 ಎಲ್‌ಇಟಿ 2018**

(ವೆಂಕಟರಮಣಪ್ಪ)
ಕಾರ್ಮಿಕ ಸಚಿವರು

## ಅನುಬಂಧ-1

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೊಂದಣಿಯಾದ ಕಾರ್ಮಿಕರ ವೃತ್ತವಾರು (ತಾಲ್ಲೂಕುವಾರು) ಮಾಹಿತಿ**

| ಕ್ರ. ಸಂ | ಜಿಲ್ಲೆ | ತಾಲ್ಲೂಕು | ನೋಂದಣಿಯಾಗಿರುವ ಕಾರ್ಮಿಕರ ಸಂಖ್ಯೆ |
|---|---|---|---|
| 1 | ಕಾರ್ಮಿಕ ಅಧಿಕಾರಿಯವರ ಕಛೇರಿ, ಚಿಕ್ಕಮಗಳೂರು-1 ಮತ್ತು 2 | ಚಿಕ್ಕಮಗಳೂರು ವೃತ್ತ 1 ಮತ್ತು 2 | 11809 |
| | | ತರಿಕೇರಿ | 6362 |
| | | ಕೊಪ್ಪ, ಶೃಂಗೇರಿ, ಎನ್ಆರ್ ಪುರ | 970 |
| | | ಮೂಡಿಗೆರೆ | 807 |
| | | ಕಡೂರು | 5191 |
| | | **ಒಟ್ಟು** | **25139** |
| 2 | ಕಾರ್ಮಿಕ ಅಧಿಕಾರಿಯವರ ಕಛೇರಿ, ಬಳ್ಳಾರಿ 1 & 2 | ಬಳ್ಳಾರಿ | 15025 |
| | | ಸಿರುಗುಪ್ಪ | 3802 |
| | | ಹೊಸಪೇಟೆ | 4465 |
| | | ಕೂಡ್ಲಗಿ | 4890 |
| | | ಸಂಡೂರು | 4085 |
| | | ಹೂವಿನಹಡಗಲಿ | 2776 |
| | | ಎಚ್ ಬಿ ಹಳ್ಳಿ | 3204 |
| | | **ಒಟ್ಟು** | **38247** |
| 3 | ಕಾರ್ಮಿಕ ಅಧಿಕಾರಿಯವರ ಕಛೇರಿ, ಮೈಸೂರು | ಮೈಸೂರು | 33291 |
| | | ನಂಜನಗೂಡು | 3855 |
| | | ಹುಣಸೂರು | 5634 |
| | | ಟಿ ನರಸೀಪುರ | 2187 |
| | | ಕೆ ಆರ್ ನಗರ | 2528 |
| | | ಪಿರಿಯಾಪಟ್ಟಣ | 5785 |
| | | ಹೆಚ್ ಡಿ ಕೋಟೆ | 1725 |
| | | **ಒಟ್ಟು** | **55005** |
| 4 | ಕಾರ್ಮಿಕ ಅಧಿಕಾರಿಯವರ ಕಛೇರಿ ರಾಮನಗರ | ರಾಮನಗರ.ವೃತ್ತ | 8743 |
| | | ಕನಕಪುರ.ವೃತ್ತ | 11026 |
| | | ಚನ್ನಪಟ್ಟಣ.ವೃತ್ತ | 10755 |
| | | ಮಾಗಡಿ.ವೃತ್ತ | 3667 |
| | | **ಒಟ್ಟು** | **34191** |
| 5 | ಕಾರ್ಮಿಕ ಅಧಿಕಾರಿಯವರ ಕಛೇರಿ, ಹಾಸನ | ಆಲೂರು | 791 |
| | | ಬೇಲೂರು | 2170 |

| | | | |
|---|---|---|---|
| | | ಸಕಲೇಶಪುರ | 1041 |
| | | ಹಾಸನ | 11079 |
| | | ಅರಸೀಕೆರೆ | 2296 |
| | | ಚನ್ನರಾಯಪಟ್ಟಣ | 4359 |
| | | ಹೊಳೆನರಸೀಪುರ | 4168 |
| | | ಅರಕಲಗೂಡು | 1344 |
| | | **ಒಟ್ಟು** | **27248** |
| 6 | ಕಾರ್ಮಿಕ ಅಧಿಕಾರಿಯವರ ಕಛೇರಿ,ತುಮಕೂರು | ತುಮಕೂರು | 14316 |
| | | ಗುಬ್ಬಿ | 3903 |
| | | ಚಿಕ್ಕ ನಾಯಕನಹಳ್ಳಿ | 1080 |
| | | ಕುಣಿಗಲ್ | 4744 |
| | | ತುರುವೇಕೆರೆ | 1544 |
| | | ಶಿರಾ | 3827 |
| | | ಮಧುಗಿರಿ&ಕೊರಟಗೆರೆ | 4893 |
| | | ಪಾವಗಡ | 4820 |
| | | ತಿಪಟೂರು | 3195 |
| | | **ಒಟ್ಟು** | **42322** |
| 7 | ಕಾರ್ಮಿಕ ಅಧಿಕಾರಿಯವರ ಕಛೇರಿ, ದಾವಣಗೆರೆ | ದಾವಣಗೆರೆ | 24816 |
| | | ಹರಿಹರ | 7072 |
| | | ಹರಪ್ಪನಹಳ್ಳಿ | 5574 |
| | | ಹೊನ್ನಾಳಿ | 5365 |
| | | ಜಗಳೂರು | 2174 |
| | | ಚನ್ನಗಿರಿ | 4217 |
| | | **ಒಟ್ಟು** | **49218** |
| 8 | ಕಾರ್ಮಿಕ ಅಧಿಕಾರಿಯವರ ಕಛೇರಿ, ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 6690 |
| | | ಬಾಗೇಪಲ್ಲಿ | 3636 |
| | | ಚಿಂತಾಮಣಿ | 3448 |
| | | ಶಿಡ್ಲಘಟ್ಟ | 2908 |
| | | ಗೌರಿಬಿದನೂರು | 3368 |
| | | ಗುಡಿಬಂಡೆ | 145 |
| | | **ಒಟ್ಟು** | **20195** |
| 9 | ಕಾರ್ಮಿಕ ಅಧಿಕಾರಿಯವರ ಕಛೇರಿ, ಚಾಮರಾಜನಗರ | ಚಾಮರಾಜನಗರ | 6537 |
| | | ಕೊಳ್ಳೇಗಾಲ | 5903 |
| | | ಗುಂಡ್ಲುಪೇಟೆ | 2454 |
| | | **ಒಟ್ಟು** | **14894** |
| 10 | ಕಾರ್ಮಿಕ ಅಧಿಕಾರಿಯವರ ಕಛೇರಿ, ಗದಗ | 01ನೇ ವೃತ್ತ, ಗದಗ | 5108 |

| | | | |
|---|---|---|---|
| | | 02ನೇ ವೃತ್ತ, ಗದಗ | 2369 |
| | | ರೋಣ | 1781 |
| | | ಮುಂಡರಗಿ | 1839 |
| | | ಶಿರಹಟ್ಟಿ | 1644 |
| | | ನರಗುಂದ | 1705 |
| | | **ಒಟ್ಟು** | **14446** |
| 11 | ಕಾರ್ಮಿಕ ಅಧಿಕಾರಿಯವರ ಕಛೇರಿ, ಮಂಡ್ಯ 1 & 2 | ಮಂಡ್ಯ ವೃತ್ತ | 9057 |
| | | ಮದ್ದೂರು | 4554 |
| | | ಕೆ ಆರ್ ಪೇಟೆ | 4240 |
| | | ನಾಗಮಂಗಲ | 828 |
| | | ಮಳವಳ್ಳಿ | 5489 |
| | | ಶ್ರೀರಂಗಪಟ್ಟಣ | 3477 |
| | | ಪಾಂಡವಪುರ | 3897 |
| | | **ಒಟ್ಟು** | **31542** |
| 12 | ಕಾರ್ಮಿಕ ಅಧಿಕಾರಿಯವರ ಕಛೇರಿ ಚಿತ್ರದುರ್ಗ | ಚಿತ್ರದುರ್ಗ, ವೃತ್ತ | 8749 |
| | | ಹಿರಿಯೂರು | 5710 |
| | | ಚಳ್ಳಕೆರೆ | 5266 |
| | | ಮೊಳಕಾಲ್ಮೂರು | 2557 |
| | | ಹೊಸದುರ್ಗ | 3477 |
| | | ಹೊಳಲ್ಕೆರೆ | 2683 |
| | | **ಒಟ್ಟು** | **28442** |
| 13 | ಕಾರ್ಮಿಕ ಅಧಿಕಾರಿಯವರ ಕಛೇರಿ ಶಿವಮೊಗ್ಗ | ಶಿವಮೊಗ್ಗ, ವೃತ್ತ | 17010 |
| | | ಭದ್ರಾವತಿ | 3999 |
| | | ಸಾಗರ | 4094 |
| | | ಸೊರಬ | 3589 |
| | | ಶಿಕಾರಿಪುರ | 5732 |
| | | ತೀರ್ಥಹಳ್ಳಿ | 2555 |
| | | ಹೊಸನಗರ | 3570 |
| | | **ಒಟ್ಟು** | **40549** |
| 14 | ಕಾರ್ಮಿಕ ಅಧಿಕಾರಿಯವರ ಕಛೇರಿ ಕೋಲಾರ | ಕೋಲಾರ,ವೃತ್ತ | 25716 |
| | | ಬಂಗಾರಪೇಟೆ | 9293 |
| | | ಮಾಲೂರು | 6021 |
| | | ಮುಳಬಾಗಿಲು | 8053 |
| | | ಕೆ.ಜಿ.ಎಫ್, | 3461 |
| | | ಶ್ರೀನಿವಾಸ ಪುರ | 4667 |
| | | **ಒಟ್ಟು** | **57211** |

| | | | |
|---|---|---|---|
| 15 | ಕಾರ್ಮಿಕ ಅಧಿಕಾರಿಯವರ ಕಛೇರಿ, ಕೊಪ್ಪಳ | ಕೊಪ್ಪಳ, ವೃತ್ತ | 5789 |
| | | ಕುಷ್ಟಗಿ | 9578 |
| | | ಗಂಗಾವತಿ | 6418 |
| | | ಒಟ್ಟು | **21785** |
| 16 | ಕಾರ್ಮಿಕ ಅಧಿಕಾರಿಯವರ ಕಛೇರಿ, ಹುಬ್ಬಳ್ಳಿ 1 & 2 | ಹುಬ್ಬಳ್ಳಿ, ವೃತ್ತ | 8802 |
| | | ಧಾರವಾಡ, ವೃತ್ತ | 13063 |
| | | ನವಲಗುಂದ | 6286 |
| | | ಕುಂದಗೋಳ | 6137 |
| | | ಕಲಘಟಗಿ | 31 |
| | | ಒಟ್ಟು | **34319** |
| 17 | ಕಾರ್ಮಿಕ ಅಧಿಕಾರಿಯವರ ಕಛೇರಿ, ಹಾವೇರಿ | ಹಾವೇರಿ, ವೃತ್ತ | 5599 |
| | | ಶಿಗ್ಗಾಂವ್ | 3284 |
| | | ಸವಣೂರು | 1341 |
| | | ರಾಣೇಬೆನ್ನೂರು | 5875 |
| | | ಹಿರೇಕೆರೂರು | 3073 |
| | | ಬ್ಯಾಡಗಿ | 2367 |
| | | ಹಾನಗಲ್ | 2913 |
| | | ಒಟ್ಟು | **24452** |
| 18 | ಕಾರ್ಮಿಕ ಅಧಿಕಾರಿ, ದ.ಕ ಉಪವಿಭಾಗ-1 & 2, ಮಂಗಳೂರು | ಮಂಗಳೂರು, ವೃತ್ತ | 18573 |
| | | ಬೆಳ್ತಂಗಡಿ | 4516 |
| | | ಮಂಗಳೂರು, ವೃತ್ತ | 9831 |
| | | ಬಂಟ್ವಾಳ | 11813 |
| | | ಪುತ್ತೂರು | 6537 |
| | | ಒಟ್ಟು | **51270** |
| 19 | ಕಾರ್ಮಿಕ ಅಧಿಕಾರಿಗಳ ಕಛೇರಿ ಉತ್ತರಕನ್ನಡ ಜಿಲ್ಲೆ, ಕಾರವಾರ | ಕಾರವಾರ, ವೃತ್ತ | 1641 |
| | | ಅಂಕೋಲಾ | 2474 |
| | | ಕುಮಟಾ | 7752 |
| | | ಹೊನ್ನಾವರ | 9737 |
| | | ಭಟ್ಕಳ | 10449 |
| | | ಶಿರಸಿ | 2232 |
| | | ಸಿದ್ದಾಪುರ | 974 |
| | | ಯಲ್ಲಾಪುರ | 2025 |
| | | ಮುಂಡಗೋಡ | 767 |
| | | ಹಳಿಯಾಳ | 2538 |
| | | ದಾಂಡೇಲಿ | 13255 |

| | | | |
|---|---|---|---|
| | | ಒಟ್ಟು | **53844** |
| 20 | ಕಾರ್ಮಿಕ ಅಧಿಕಾರಿಗಳ ಕಛೇರಿ, ಬೆಳಗಾವಿ 1& 2 | ಹಿರಿಯಕಾರ್ಮಿಕ ನಿರೀಕ್ಷಕರು 1ನೇ ಮತ್ತು 2ನೇ ವೃತ್ತ, ಬೆಳಗಾವಿ | 8716 |
| | | ಗೋಕಾಕ | 6444 |
| | | ಹುಕ್ಕೇರಿ | 4801 |
| | | ನಿಪ್ಪಾಣಿ | 4189 |
| | | ಚಿಕ್ಕೋಡಿ | 2400 |
| | | ಅಥಣಿ | 2851 |
| | | ರಾಯಬಾಗ | 1721 |
| | | ರಾಮದುರ್ಗ | 2373 |
| | | ಸೌವದತ್ತಿ | 4805 |
| | | ಬೈಲಹೊಂಗಲ | 8891 |
| | | ಒಟ್ಟು | **47191** |
| 21 | ಕಾರ್ಮಿಕ ಅಧಿಕಾರಿಗಳ ಕಛೇರಿ ರಾಯಚೂರು ಜಿಲ್ಲೆ, ರಾಯಚೂರು. | ರಾಯಚೂರು 1ನೇ ವೃತ್ತ | 8810 |
| | | ರಾಯಚೂರು 2ನೇ ವೃತ್ತ | 1086 |
| | | ಮಾನ್ವಿ | 3447 |
| | | ಸಿಂಧನೂರು | 2382 |
| | | ಲಿಂಗಸ್ಗೂರು | 1685 |
| | | ಒಟ್ಟು | **17410** |
| 22 | ಕಾರ್ಮಿಕ ಅಧಿಕಾರಿಗಳ ಕಛೇರಿ ಮಡಿಕೇರಿ | ಮಡಿಕೇರಿ | 886 |
| | | ಸೋಮವಾರಪೇಟೆ | 974 |
| | | ವಿರಾಜಪೇಟೆ | 2184 |
| | | ಒಟ್ಟು | **4044** |
| 23 | ಕಾರ್ಮಿಕ ಅಧಿಕಾರಿಗಳ ಕಛೇರಿ ಬೀದರ | ಭಾಲ್ಕಿ | 6967 |
| | | ಔರಾದ | 6557 |
| | | ಹುಮನಾಬಾದ | 6352 |
| | | ಬಸವಕಲ್ಯಾಣ | 1996 |
| | | ಬೀದರ | 27720 |
| | | ಒಟ್ಟು | **49592** |
| 24 | ಕಾರ್ಮಿಕ ಅಧಿಕಾರಿಗಳ ಕಛೇರಿ ಕಲಬುರಗಿ | ಕಲಬುರಗಿ, ವೃತ್ತ | 26252 |
| | | ಆಳಂದ | 9561 |
| | | ಅಫಜಲಪುರ | 2201 |
| | | ಜೇವರ್ಗಿ | 2477 |
| | | ಸೇಡಂ | 1188 |
| | | ಚಿತ್ತಾಪೂರ | 2801 |

| | | | |
|---|---|---|---|
| | | ಚಿಂಚೋಳಿ | 1575 |
| | | ಒಟ್ಟು | **46055** |
| 25 | ಕಾರ್ಮಿಕ ಅಧಿಕಾರಿಗಳ ಕಛೇರಿ ಬಾಗಲಕೋಟ | ಬಾಗಲಕೋಟ, ವೃತ್ತ | 10684 |
| | | ಬೀಳಗಿ | 3466 |
| | | ಹುನಗುಂದ | 6887 |
| | | ಜಮಖಂಡಿ | 7697 |
| | | ಮುಧೋಳ | 6925 |
| | | ಬದಾಮಿ | 8141 |
| | | ಒಟ್ಟು | **43800** |
| 26 | ಕಾರ್ಮಿಕ ಅಧಿಕಾರಿಗಳ ಕಛೇರಿ ಯಾದಗಿರಿ | ಯಾದಗಿರಿ, ವೃತ್ತ | 10266 |
| | | ಶಹಾಪುರ | 2320 |
| | | ಸುರಪುರ | 8737 |
| | | ಒಟ್ಟು | **21323** |
| 27 | ಕಾರ್ಮಿಕ ಅಧಿಕಾರಿಗಳ ಕಛೇರಿ ವಿಜಯಪುರ 1 & 2 | ವಿಜಯಪುರ, ವೃತ್ತ | 32847 |
| | | ಮುದ್ದೇಬಿಹಾಳ | 13775 |
| | | ಬಸವನ ಬಾಗೇವಾಡಿ | 7630 |
| | | ಸಿಂದಗಿ | 3707 |
| | | ಇಂಡಿ | 921 |
| | | ಒಟ್ಟು | **58880** |
| 28 | ಕಾರ್ಮಿಕ ಅಧಿಕಾರಿಗಳ ಕಛೇರಿ, ಉಡುಪಿ ಜಿಲ್ಲೆ, ಉಡುಪಿ | ಉಡುಪಿ ವೃತ್ತ | 13992 |
| | | ಕಾರ್ಕಳ | 5375 |
| | | ಕುಂದಾಪುರ | 9796 |
| | | ಒಟ್ಟು | **29163** |
| 29 | ಕಾರ್ಮಿಕ ಅಧಿಕಾರಿಯವರ ಕಚೇರಿ ಉಪವಿಭಾಗ – 1 ರಿಂದ 6, ಬೆಂಗಳೂರು | ಬೆಂಗಳೂರು ವೃತ್ತ 1 ರಿಂದ 49 | 333510 |
| | | ಆನೇಕಲ್ | 13150 |
| | | ಹೊಸಕೋಟೆ | 10256 |
| | | ದೇವನಹಳ್ಳಿ | 10635 |
| | | ದೊಡ್ಡಬಳ್ಳಾಪುರ | 7688 |
| | | ನೆಲಮಂಗಲ | 2600 |
| | | ಒಟ್ಟು | **377839** |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 81
ಸದಸ್ಯರ ಹೆಸರು : ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ)
ಉತ್ತರಿಸುವ ದಿನಾಂಕ : 09-07-2018
ಉತ್ತರಿಸುವವರು : ಕಂದಾಯ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಇತ್ತೀಚಿನ ಮಳೆಯಿಂದಾಗಿ ತೀರ್ಥಹಳ್ಳಿ ಮತ್ತು ಹೊಸನಗರ ತಾಲ್ಲೂಕುಗಳಲ್ಲಿ ಆಗಿರುವ ಹಾನಿಯು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಇತ್ತೀಚಿನ ಮಳೆಯಿಂದಾಗಿ ತೀರ್ಥಹಳ್ಳಿ ಹಾಗೂ ಹೊಸನಗರ ತಾಲ್ಲೂಕುಗಳಲ್ಲಿ ಹಾನಿ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಸದರಿ ಹಾನಿ ಹಾಗೂ ಪರಿಹಾರ ನೀಡಲಾದ ವಿವರ ಕೆಳಕಂಡಂತಿರುತ್ತದೆ.<br>1) ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಮಳೆಯಿಂದ 14 ಕಚ್ಚಾ ಮನೆಗಳು ಹಾನಿಯಾಗಿದ್ದು ರೂ.58,800/-ಗಳನ್ನು ಹಾಗೂ 4 ಜಾನುವಾರುಗಳಿಗೆ ಸಿಡಿಲು ಬಡಿದು ಮೃತಪಟ್ಟಿದ್ದು ಅವುಗಳಿಗೆ ರೂ.85,000/-ಗಳು ಒಟ್ಟು ರೂ.1,43,800/-ಗಳ ಪರಿಹಾರ ನೀಡಲಾಗಿದೆ.<br>2) ಹೊಸನಗರ ತಾಲ್ಲೂಕಿನಲ್ಲಿ 24 ಕಚ್ಚಾ ಮನೆಗಳು ಹಾನಿಯಾಗಿದ್ದು ರೂ.1,70,000/-ಗಳ ಪರಿಹಾರ ವಿತರಿಸಲಾಗಿದೆ. 9 ಜಾನುವಾರು ಹಾನಿಗೆ ರೂ.1,80,000/-ಗಳನ್ನು ಹಾಗೂ 1 ಮಾನವ ಜೀವಹಾನಿಗೆ ರೂ.4,00,000/-ಗಳ ಪರಿಹಾರವನ್ನು ನೀಡಲಾಗಿದೆ.<br>180-28 ಎಕರೆ ಕೃಷಿ ಬೆಳೆ ಹಾನಿಯಾಗಿದ್ದಕ್ಕೆ ರೂ.11,50,000/-ಗಳನ್ನು 240 ಫಲಾನುಭವಿಗಳಿಗೆ ಹಾಗೂ 161-08 ಎಕರೆ ತೋಟಗಾರಿಕೆ ಬೆಳೆ ಹಾನಿಯಾಗಿದ್ದಕ್ಕೆ ರೂ.6,20,000/-ಗಳನ್ನು 65 ಫಲಾನುಭವಿಗಳಿಗೆ ಕೇಂದ್ರ ಸರ್ಕಾರದ ಎಸ್.ಡಿ.ಆರ್.ಎಫ್/ಎನ್.ಡಿ.ಆರ್.ಎಫ್ ಮಾರ್ಗಸೂಚಿಯ ಪ್ರಕಾರ ಪರಿಹಾರ ನೀಡಲು ಕ್ರಮ ಕೈಗೊಳ್ಳಲಾಗಿದೆ. |
| ಆ | ಬಂದಿದ್ದಲ್ಲಿ, ಈಗಾಗಲೇ ಪರಿಹಾರ ನೀಡಲಾಗಿದೆಯೇ; (ಪರಿಹಾರ ಮೊತ್ತದ ಬಗ್ಗೆ ವಿವರ ನೀಡುವುದು) | |

ಸಂಖ್ಯೆ: ಕಂಇ 107 ಟಿಎನ್ಆರ್ 2018

(ಆರ್.ವಿ. ದೇಶಪಾಂಡೆ)
ಕಂದಾಯ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಹಾಗೂ ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

(15ನೇ ವಿಧಾನಸಭೆ, 1ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 82
2) ಸದಸ್ಯರ ಹೆಸರು : ಶ್ರೀ ಬೋಪಯ್ಯ ಕೆ.ಜಿ. (ವೀರಾಜಪೇಟೆ)
3) ಉತ್ತರಿಸುವ ದಿನಾಂಕ : 09.07.2018
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಕಾಡಾನೆ ಮತ್ತು ಹುಲಿಗಳ ಹಾವಳಿ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ಕಾಡಾನೆಗಳು ಹಾಗೂ ಹುಲಿಗಳ ದಾಳಿಗಳನ್ನು ತಡೆಗಟ್ಟಲು ಕೈಗೊಂಡ ಕ್ರಮಗಳೇನು; (ವಿವರಗಳನ್ನು ಒದಗಿಸುವುದು) | ಹೌದು.<br><br>ಕೊಡಗು ಜಿಲ್ಲೆಯಲ್ಲಿ ಕಾಡಾನೆ ಮತ್ತು ಹುಲಿಗಳ ದಾಳಿಯನ್ನು ತಡೆಗಟ್ಟಲು ಇಲಾಖೆಯಿಂದ ಕೈಗೊಂಡಿರುವ ಕ್ರಮಗಳು ಈ ಕೆಳಗಿನಂತಿದೆ.<br><br>1) ಸುಧಾರಿತ ಸೌರಶಕ್ತಿ ಬೇಲಿ ನಿರ್ಮಾಣ/ ನಿರ್ವಹಣೆ<br>2) ಆನೆ ತಡೆ ಕಂದಕ ನಿರ್ಮಾಣ/ನಿರ್ವಹಣೆ<br>3) ವನ್ಯಜೀವಿಗಳಿಗೆ ಕುಡಿಯುವ ನೀರಿಗಾಗಿ ಕೆರೆಗಳ ನಿರ್ಮಾಣ/ನಿರ್ವಹಣೆ<br>4) ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ Rapid Response Teams (RRT)ಗಳನ್ನು ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳಿಗೆ Wireless Networking ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>5) ಕಾಡಾನೆ ಹಾವಳಿಯನ್ನು ಪರಿಣಾಮಕಾರಿಯಾಗಿ ನಿಯಂತ್ರಿಸಲು ರೈಲ್ವೆ ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲಾಗಿದೆ.<br>6) ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ.<br>7) ಕೊಡಗು ಜಿಲ್ಲೆಯ ಮಡಿಕೇರಿ ವಿಭಾಗದಲ್ಲಿ 2 ಆನೆ ಗುಂಪುಗಳು ಮತ್ತು ವಿರಾಜಪೇಟೆ ವಿಭಾಗದಲ್ಲಿ 06 ಆನೆ ಗುಂಪುಗಳು ಒಟ್ಟು 08 ಆನೆ ಗುಂಪುಗಳ ಒಂದೊಂದು ಗುಂಪಿನ ಒಂದು ವಯಸ್ಕ ಹೆಣ್ಣಾನೆಗೆ ರೇಡಿಯೋ ಕಾಲರ್ ಅಳವಡಿಸಿ, 24 ಗಂಟೆ ಆನೆಹಿಂಡಿನ ಚಲನ-ವಲನಗಳ ಮೇಲೆ ನಿಗಾ ವಹಿಸಿ, ಸದರಿ ಆನೆಗಳು ಯಾವ ಯಾವ ಪ್ರದೇಶಗಳಲ್ಲಿ ಚಲಿಸುತ್ತಿವೆ ಎಂಬ ವಿಷಯವನ್ನು ಎಸ್.ಎಂ.ಎಸ್. ಮುಖಾಂತರ ಸ್ಥಳೀಯ ಜನರಿಗೆ ಆಗಿಂದ್ದಾಗ್ಗೆ ಮಾಹಿತಿ ನೀಡಲಾಗುತ್ತಿದೆ.<br>8) ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಕಾಡಾನೆಗಳನ್ನು ಸೆರೆಹಿಡಿದು ಆಗ್ಗಿಂದಾಗ್ಗೆ ಆನೆ ಶಿಬಿರಗಳಿಗೆ ಕಳುಹಿಸಲಾಗಿರುತ್ತದೆ.<br>9) ರೈತರಿಗೆ ಸೋಲಾರ್ ಬೇಲಿ ನಿರ್ಮಾಣಕ್ಕೆ ಶೇ 50ರಷ್ಟು ಧನ ಸಹಾಯವನ್ನು ಇಲಾಖೆಯಿಂದ ನೀಡಲಾಗುತ್ತಿದೆ.<br>10) ಹುಲಿ ಹಾವಳಿಯನ್ನು ತಡೆಗಟ್ಟುವಲ್ಲಿ ಸುಧಾರಿತ ಸೌರಬೇಲಿಯನ್ನು ಪ್ರಾಯೋಗಿಕವಾಗಿ ವಿರಾಜಪೇಟೆ ವಿಭಾಗದಲ್ಲಿ ಕೈಗೆತ್ತಿಕೊಳ್ಳಲಾಗುತ್ತಿದೆ. ಅಲ್ಲದೇ ಬೋನುಗಳನ್ನು ಬಳಸಿ ಸೆರೆ ಹಿಡಿಯುವ ಪ್ರಯತ್ನಗಳನ್ನು ಮಾಡಲಾಗುತ್ತಿದೆ. ಇನ್ನು ಮುಂದೆ ರೈಲು ಬ್ಯಾರಿಕೇಡ್ ಜೊತೆಗೆ ಸೋಲಾರ್ ತಂತಿಯನ್ನು ಬಳಸಿ ಹುಲಿ ನುಸಳದಂತೆ ತಡೆಯಲು ಕ್ರಮ ಕೈಗೊಳ್ಳಲಾಗುವುದು. |

| | | |
|---|---|---|
| ಆ) | ಕಳೆದ 3 ವರ್ಷಗಳಿಂದ ಕಾಡಾನೆಗಳ ದಾಳಿಯಿಂದ ಎಷ್ಟು ಜನ ಪ್ರಾಣ ಕಳೆದುಕೊಂಡಿದ್ದಾರೆ;<br>ಗಾಯಗೊಂಡವರು ಎಷ್ಟು; | ಕಳೆದ ಮೂರು ವರ್ಷಗಳಿಂದ ಕಾಡಾನೆ ದಾಳಿಯಿಂದ 20 ಮಾನವ ಪ್ರಾಣಹಾನಿ ಹಾಗೂ 17 ಗಾಯಗೊಂಡ ಪ್ರಕರಣಗಳು ದಾಖಲಾಗಿರುತ್ತವೆ. |
| ಇ) | ಎಷ್ಟು ಜನರಿಗೆ ಪರಿಹಾರ ವಿತರಿಸಲಾಗಿದೆ; ಪರಿಹಾರ ವಿತರಣೆ ಮಾಡಲು ಎಷ್ಟು ಬಾಕಿ ಇದೆ; (ವಿವರಗಳನ್ನು ನೀಡುವುದು) | ಕಳೆದ ಮೂರು ವರ್ಷಗಳಿಂದ ಕಾಡಾನೆ ದಾಳಿಯಿಂದ ಉಂಟಾದ ಮಾನವ ಪ್ರಾಣಹಾನಿ ಹಾಗೂ ಗಾಯಗೊಂಡ ಎಲ್ಲ ಪ್ರಕರಣಗಳಲ್ಲಿ ದಯಾತ್ಮಕ ಧನ ಪಾವತಿಸಲಾಗಿದೆ. ವಿವರ ಕೆಳಕಂಡಂತಿದೆ.<br>(ರೂ.ಲಕ್ಷಗಳಲ್ಲಿ) |

| ವರ್ಷ | ಪ್ರಾಣಹಾನಿ | | ಗಾಯ | |
|---|---|---|---|---|
| | ಪ್ರಕರಣ | ಮೊತ್ತ | ಪ್ರಕರಣ | ಮೊತ್ತ |
| 2015–16 | 09 | 45.00 | 07 | 1.256 |
| 2016–17 | 06 | 30.00 | 05 | 2.666 |
| 2017–18 | 05 | 25.00 | 15 | 6.125 |

ಸಂಖ್ಯೆ: ಅಪಜೀ 114 ಎಫ್‌ಡಬ್ಲ್ಯೂಎಲ್ 2018

(ಆರ್. ಶಂಕರ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಆರ್. ಶಂಕರ್
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 100
ಸದಸ್ಯರ ಹೆಸರು : ಶ್ರೀ ಎಂ. ಕೃಷ್ಣಾರೆಡ್ಡಿ (ಚಿಂತಾಮಣಿ)
ಉತ್ತರಿಸುವ ದಿನಾಂಕ : 09.07.2018
ಉತ್ತರಿಸುವ ಸಚಿವರು : ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಚಿಂತಾಮಣಿ ತಾಲ್ಲೂಕು, ಅಂಬಾಜಿದುರ್ಗ ಹೋಬಳಿ, ಕಾವಲುಗಾನಹಳ್ಳಿ ಸ.ನಂ. 12ರ ಸರ್ಕಾರಿ ಬೆಟ್ಟದ ಜಮೀನಿನಲ್ಲಿ ಅನಧಿಕೃತವಾಗಿ ಶ್ರೀ ವಲ್ಲಭ ಗಣಪತಿ ಶ್ರೀ ಚತುರ್ಮುಖಲಿಂಗೇಶ್ವರ ಹಾಗೂ ಮಾತೆ ಶ್ರೀ ಜಗದಾಂಬೆಯ ವಿಗ್ರಹಗಳನ್ನು (ಶ್ರೀ ಮಹಾಕೈಲಾಸಗಿರಿ ಕ್ಷೇತ್ರ) ಪ್ರತಿಷ್ಠಾಪಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಹೌದು.</td></tr>
<tr><td>ಆ)</td><td>ಹಾಗಿದ್ದಲ್ಲಿ ಅನಧಿಕೃತವಾಗಿ ನಿರ್ಮಾಣ ಮಾಡಿರುವ ಕಟ್ಟಡಗಳ ವಿಸ್ತೀರ್ಣ ಎಷ್ಟು; ಯಾವ ಯಾವ ಕಟ್ಟಡಗಳನ್ನು ನಿರ್ಮಾಣ ಮಾಡಲಾಗಿದೆ; ಪೂರ್ಣ ವಿವರ ನೀಡುವುದು;</td><td>ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ತಾಲ್ಲೂಕು, ಅಂಬಾಜಿದುರ್ಗ ಹೋಬಳಿ, ಕಾವಲುಗಾನಹಳ್ಳಿ ಸ.ನಂ. 12ರ ಸರ್ಕಾರಿ ಬೆಟ್ಟದ ಜಮೀನಿನಲ್ಲಿ ಈ ಕೆಳಕಂಡಂತೆ ಕಟ್ಟಡಗಳನ್ನು ನಿರ್ಮಿಸಿರುವುದು ಗಮನಕ್ಕೆ ಬಂದಿದೆ.
<table>
<tr><th>ಕ್ರ ಸಂ.</th><th>ವಿವರ</th><th>ವಿಸ್ತೀರ್ಣ (ಅಡಿಗಳಲ್ಲಿ)</th></tr>
<tr><td>1.</td><td>ಶ್ರೀ ವಲ್ಲಭ ಗಣಪತಿ ದೇವಾಲಯ</td><td>20x20</td></tr>
<tr><td>2.</td><td>ಶ್ರೀ ಚತುರ್ಮುಖ ಲಿಂಗ ದೇವಾಲಯ</td><td>30x20</td></tr>
<tr><td>3.</td><td>ಶ್ರೀ ಜಗದಾಂಬೆ ದೇವಾಲಯ</td><td>20x20</td></tr>
<tr><td>4.</td><td>ಶ್ರೀ ಉದ್ಭವಲಿಂಗ ದೇವಾಲಯ</td><td>100x50</td></tr>
<tr><td>5.</td><td>ಕಲ್ಯಾಣೋತ್ಸವ ಮಂದಿರ</td><td>50x41</td></tr>
<tr><td>6.</td><td>ಅನ್ನಪೂರ್ಣೇಶ್ವರಿ ಅನ್ನದಾನ ಮಂದಿರ</td><td>40x70</td></tr>
<tr><td>7.</td><td>ಪ್ರಸಾದ ಮಂದಿರ</td><td>30x40</td></tr>
<tr><td>8.</td><td>ಅಶ್ವತ್ಥಕಟ್ಟೆ</td><td></td></tr>
</table></td></tr>
<tr><td>ಇ)</td><td>ಅನಧಿಕೃತವಾಗಿ ನಿರ್ಮಾಣ ಮಾಡಿರುವ ದೇವಸ್ಥಾನವನ್ನು ತೆರವುಗೊಳಿಸಲು ಕೈಗೊಂಡ ಕ್ರಮಗಳೇನು; ವಿವರ ನೀಡುವುದು?</td><td>ಪ್ರಸ್ತಾಪಿತ ಸ.ನಂ.12ರಲ್ಲಿನ ಜಮೀನಿನ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:13275/2017 ಪ್ರಕರಣ ದಾಖಲಾಗಿದ್ದು, ಅದು ವಿಚಾರಣೆ ಹಂತದಲ್ಲಿದೆ. ಪ್ರಕರಣವನ್ನು ಹಿಂಬಾಲಿಸಲು ಹಾಗೂ ಸದರಿ ಜಮೀನಿನ ಒತ್ತುವರಿ ಬಗ್ಗೆ ನಿಖರ ಮಾಹಿತಿ ಪಡೆದು ಸಲ್ಲಿಸುವಂತೆ ಉಪವಿಭಾಗಾಧಿಕಾರಿ, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ ಇವರಿಗೆ ನಿರ್ದೇಶನ ನೀಡಲಾಗಿದೆ.</td></tr>
</table>

ಸಂಖ್ಯೆ: ಆರ್‌ಡಿ 80 ಎಲ್‌ಜಿಕ್ಯೂ 2018

ಆರ್.ವಿ.ದೇಶಪಾಂಡೆ
ಕಂದಾಯ ಹಾಗೂ ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

(15ನೇ ವಿಧಾನಸಭೆ, 1ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 71
2) ಸದಸ್ಯರ ಹೆಸರು : ಶ್ರೀ ಆರ್. ನರೇಂದ್ರ (ಹನೂರು)
3) ಉತ್ತರಿಸುವ ದಿನಾಂಕ : 09.07.2018
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಎರಡು ವರ್ಷಗಳಲ್ಲಿ ಮನುಷ್ಯರ ಹಾಗೂ ಜಾನುವಾರುಗಳ ಮೇಲೆ ದಾಳಿ ನಡೆಸಿರುವ ಹುಲಿಗಳ ಪೈಕಿ ಕಾರ್ಯಾಚರಣೆ ನಡೆಸಿ ಸೆರೆ ಹಿಡಿದಿರುವ ಹುಲಿಗಳ ಸಂಖ್ಯೆ ಎಷ್ಟು; | ಕಳೆದ ಎರಡು ವರ್ಷಗಳಲ್ಲಿ ರಾಜ್ಯದಲ್ಲಿ ಕಾರ್ಯಾಚರಣೆ ಮೂಲಕ ಸೆರೆಹಿಡಿದ ಹುಲಿಗಳ ವಿವರ ಈ ಕೆಳಕಂಡಂತಿದೆ:<br><br>ಕ್ರ.ಸಂ \| ವರ್ಷ \| ಸೆರೆಹಿಡಿದಿರುವ ಹುಲಿಗಳ ಸಂಖ್ಯೆ<br>1 \| 2016-17 \| 02<br>2 \| 2017-18 \| 02 |
| ಆ) | ಕಾರ್ಯಾಚರಣೆಯ ವೇಳೆ ಮತ್ತು ಕಾರ್ಯಾಚರಣೆ ನಡೆಸಿದ ನಂತರ ಮೃತಪಟ್ಟಿರುವ ಹುಲಿಗಳ ಸಂಖ್ಯೆ ಎಷ್ಟು ಹಾಗೂ ಇದಕ್ಕೆ ಕಾರಣಗಳೇನು? (ವಿವರ ನೀಡುವುದು) | 2016-17 ನೇ ಸಾಲಿನ ಕಾರ್ಯಾಚರಣೆಯಲ್ಲಿ ಸೆರೆ ಹಿಡಿದ 02 ಹುಲಿಗಳು ಮೃತಪಟ್ಟಿರುತ್ತವೆ.<br><br>1. ಒಂದು ಹುಲಿಯನ್ನು ಮೈಸೂರು ಮೃಗಾಲಯಕ್ಕೆ ಹಸ್ತಾಂತರಿಸಿದ ಮೂರು ದಿನಗಳ ತರುವಾಯ ಪ್ಯಾರಾಸೆಟಿಕ್ ನ್ಯುಮೋನಿಯಾದಿಂದ ಮೃತಪಟ್ಟಿರುತ್ತದೆ.<br><br>2. ಮತ್ತೊಂದು ಮೃತಪಟ್ಟ ಹುಲಿಯು ಪ್ರಯೋಗಾಲಯದ ವರದಿ ಪ್ರಕಾರ ಉಸಿರಾಟದ ವೈಫಲ್ಯದಿಂದ ಮೃತಪಟ್ಟಿರುತ್ತದೆ. |

ಸಂಖ್ಯೆ: ಅಪಜೀ 111 ಎಫ್‌ಡಬ್ಲ್ಯೂಎಲ್ 2018

(ಆರ್. ಶಂಕರ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಆರ್. ಶಂಕರ್
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

(15ನೇ ವಿಧಾನಸಭೆ, 1ನೇ ಅಧಿವೇಶನ)

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 70
2) ಸದಸ್ಯರ ಹೆಸರು : ಶ್ರೀ ಆರ್.ನರೇಂದ್ರ (ಹನೂರು)
3) ಉತ್ತರಿಸುವ ದಿನಾಂಕ : 09.07.2018
4) ಉತ್ತರಿಸುವವರು : ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾಡಾನೆಗಳ ದಾಳಿಯಿಂದ ರೈತರು ಮರಣ ಹೊಂದುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಲ್ಲಿ ಕಾಡಾನೆಗಳ ದಾಳಿಯಿಂದ ಮೃತರಾದವರ ಸಂಖ್ಯೆ ಎಷ್ಟು; ಇವುಗಳಲ್ಲಿ ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ ಹಾಗೂ ಮೃತಪಟ್ಟ ಪ್ರತಿ ರೈತ ಕುಟುಂಬಗಳಿಗೆ ನೀಡಲಾದ ಪರಿಹಾರ ಮೊತ್ತ ವೆಷ್ಟು; (ಜಿಲ್ಲಾವಾರು ವಿವರ ನೀಡುವುದು) | ಬಂದಿದೆ.<br><br>ರಾಜ್ಯದಲ್ಲಿ ಕಾಡಾನೆ ದಾಳಿಯಿಂದ ಉಂಟಾದ ಮಾನವ ಪ್ರಾಣಹಾನಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಕಳೆದ ಮೂರು ವರ್ಷಗಳಲ್ಲಿ ಮಾನವ ಪ್ರಾಣಹಾನಿ ಪ್ರಕರಣಗಳು ಹಾಗೂ ನೀಡಲಾದ ದಯಾತ್ಮಕ ಧನದ ವಿವರ ಈ ಕೆಳಕಂಡಂತಿದೆ. |

(ರೂ. ಲಕ್ಷಗಳಲ್ಲಿ)

| ವಿಭಾಗ | 2015-16 | | 2016-17 | | 2017-18 | |
|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ರಾಮನಗರ | 2 | 10.00 | 3 | 15.00 | 2 | 10.00 |
| ಬೆಂಗಳೂರು ಗ್ರಾ | – | – | 2 | 10.00 | – | |
| ಬನ್ನೇರುಘಟ್ಟ ರಾ.ಉ | 4 | 20.00 | 3 | 15.00 | 3 | 15.00 |
| ಕೋಲಾರ | 1 | 5.00 | 2 | 10.00 | | – |
| ಚಿತ್ರದುರ್ಗ | – | | 1 | 5.00 | 2 | 10.00 |
| ಬಿ.ಆರ್.ಟಿ | – | – | – | – | 1 | 5.00 |
| ಕಾವೇರಿ | 4 | 20.00 | 3 | 15.00 | | – |
| ಮಲೈ ಮಹದೇಶ್ವರ | 2 | 10.00 | 3 | 15.00 | | – |
| ಚಿಕ್ಕಮಗಳೂರು | 1 | 5.00 | 1 | 5.00 | | – |
| ಬಂಡೀಪುರ | 2 | 10.00 | 2 | 10.00 | 1 | 5.00 |
| ನಾಗರಹೊಳೆ | 2 | 10.00 | 1 | 5.00 | | – |
| ಹಾಸನ | – | – | 4 | 20.00 | 5 | 25.00 |
| ತುಮಕೂರು | 2 | 10.00 | 5 | 25.00 | – | – |
| ಮಡಿಕೇರಿ | 4 | 20.00 | 3 | 15.00 | 3 | 15.00 |
| ವಿರಾಜಪೇಟೆ | 5 | 25.00 | 3 | 15.00 | 2 | 10.00 |
| ಮಂಗಳೂರು | – | – | 1 | 5.00 | – | – |
| ಭದ್ರಾವತಿ | 1 | 5.00 | 1 | 5.00 | 3 | 15.00 |
| **ಒಟ್ಟು** | **30** | **150.00** | **38** | **190.00** | **22** | **110.00** |

| | | |
|---|---|---|
| ಆ) | ಆನೆ ಮತ್ತು ಮಾನವನ ನಡುವಿನ ಸಂಘರ್ಷ ನಿವಾರಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | **ರಾಜ್ಯದಲ್ಲಿ ಕಾಡಾನೆಗಳ ಹಾವಳಿಯನ್ನು ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:**<br>1. ಕಾಡಾನೆಗಳು ಅರಣ್ಯ ಪ್ರದೇಶದಿಂದ ಪಕ್ಕದ ಕೃಷಿ ಹಾಗೂ ಸಾರ್ವಜನಿಕರ ಸ್ಥಳಗಳಲ್ಲಿ ದಾಳಿ ಮಾಡುವುದನ್ನು ತಡೆಗಟ್ಟುವ ಸಲುವಾಗಿ ಸೂಕ್ಷ್ಮ ಪ್ರದೇಶಗಳ ಅರಣ್ಯದ ಅಂಚಿನಲ್ಲಿ ಕಾಡಾನೆ ನಿರೋಧಕ ಕಂದಕ ಮತ್ತು ಸೌರಶಕ್ತಿ ಬೇಲಿ ನಿರ್ಮಿಸಿ ನಿರ್ವಹಿಸಲಾಗುತ್ತಿದೆ.<br>2. ಕಾಡಾನೆಗಳು/ವನ್ಯಪ್ರಾಣಿಗಳು ಕೃಷಿ ಜಮೀನುಗಳಿಗೆ ದಾಳಿ ಮಾಡುವ ಸೂಕ್ಷ್ಮ ಸ್ಥಳಗಳನ್ನು ಗುರುತಿಸಿ ಹಾವಳಿ ನಡೆಸುವ ಕಾಡಾನೆಗಳನ್ನು ಪುನಃ ಕಾಡಿಗೆ ಹಿಮ್ಮೆಟ್ಟಿಸುವ ಸಲುವಾಗಿ ಕಾಡಾನೆ ತಡೆ ತಂಡಗಳನ್ನು ರಚಿಸಿ, ಪ್ರತಿಯೊಂದು ತಂಡದಲ್ಲೂ ಸ್ಥಳೀಯರ ಜೊತೆಗೆ ನಾಲ್ಕು ಮಂದಿ ಅರಣ್ಯ ಸಿಬ್ಬಂದಿಗಳನ್ನು ನಿಯೋಜಿಸಿ ಕ್ರಮಕೈಗೊಳ್ಳಲಾಗುತ್ತಿದೆ.<br>3. ಸಿಬ್ಬಂದಿಗಳಿಗೆ ವಾಕೀ–ಟಾಕೀ, ಗನ್ ಹಾಗೂ ವಾಹನಗಳ ಸೌಲಭ್ಯಗಳನ್ನು ನೀಡಿ ಕಾಡಾನೆಗಳನ್ನು ಅರಣ್ಯ ಪ್ರದೇಶಗಳಿಗೆ ಹಿಮ್ಮೆಟ್ಟಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>4. ಸಿಬ್ಬಂದಿಗಳಿಗೆ ಪಟಾಕಿ ಇನ್ನಿತರ ಸಾಮಾಗ್ರಿಗಳನ್ನು ಒದಗಿಸಿ ಹಾವಳಿ ನಡೆಸುವ ಕಾಡಾನೆಗಳನ್ನು ಅರಣ್ಯ ಪ್ರದೇಶಗಳಿಗೆ ಹಿಮ್ಮೆಟ್ಟಿಸಲು ಕ್ರಮ ಕೈಗೊಳ್ಳಲಾಗುತ್ತಿದೆ<br>5. ಕಾಡಾನೆಗಳ/ವನ್ಯಜೀವಿಗಳ ಹಾವಳಿ ಹೆಚ್ಚಾಗಿ ಕಂಡುಬರುವ ಸೂಕ್ಷ್ಮ ಪ್ರದೇಶಗಳಲ್ಲಿ ಅವಶ್ಯಕತೆಗನುಗುಣವಾಗಿ Anti Depredation Camp ಗಳನ್ನು ಮತ್ತು Rapid Response Teams (RRT) ತಂಡಗಳನ್ನು ರಚಿಸಿ ವನ್ಯಜೀವಿಗಳ ಹಾವಳಿ ನಿಯಂತ್ರಿಸಲಾಗುತ್ತಿದೆ.<br>6. ಹಾವಳಿ ಮಾಡುತ್ತಿರುವ ಕಾಡಾನೆಗಳನ್ನು ಗುರ್ತಿಸಿ ಸೆರೆ ಹಿಡಿದು ಬೇರೆಡೆಗೆ ಸ್ಥಳಾಂತರಿಸಲು ಕ್ರಮಕೈಗೊಳ್ಳಲಾಗುತ್ತಿದೆ.<br>7. ವನ್ಯಜೀವಿಗಳ ದಾಳಿಯ ಸಮಯದಲ್ಲಿ ಏನನ್ನು ಮಾಡಬೇಕು ಮತ್ತು ಏನನ್ನು ಮಾಡಬಾರದು ಎಂಬುದರ ಬಗ್ಗೆ ಸಾರ್ವಜನಿಕರಲ್ಲಿ ಸೂಚನಾ ಫಲಕದ ಹಾಗೂ ಗ್ರಾಮಸ್ಥರೊಂದಿಗೆ ಸಭೆಯನ್ನು ನಡೆಸುವ ಮುಖಾಂತರ ಜಾಗೃತಿಯನ್ನು ಮೂಡಿಸಲಾಗುತ್ತಿದೆ.<br>8. ಅರಣ್ಯ ಪ್ರದೇಶಗಳಲ್ಲಿ ಕಾಡಾನೆಗಳಿಗೆ ವರ್ಷವಿಡೀ ಕುಡಿಯುವ ನೀರು ದೊರಕುವಂತೆ ಅರಣ್ಯದಲ್ಲಿರುವ ಕೆರೆಗಳ ಹೂಳು ತೆಗೆಯುವುದು. ಗಲ್ಲಿಪ್ಲಗ್, ಚೆಕ್‌ಡ್ಯಾಮ್, ನಾಲಾಬಂಡ್, ಇತ್ಯಾದಿ ಕೆಲಸಗಳನ್ನು ರಕ್ಷಿತಾರಣ್ಯಗಳಲ್ಲಿ ತೆಗೆದು ಕೊಳ್ಳಲಾಗುತ್ತಿದೆ.<br>9. ಅರಣ್ಯ ಪ್ರದೇಶ ವ್ಯಾಪ್ತಿಯಲ್ಲಿಕಾಡು ಪ್ರಾಣಿ/ಕಾಡಾನೆಗಳಿಂದ ಉಂಟಾಗುವ ಪ್ರಾಣಹಾನಿ, ಬೆಳೆಹಾನಿ ತಡೆಯಲು ಮೇಲ್ಕಂಡತೆ ರಕ್ಷಣಾ ಕ್ರಮಗಳನ್ನು ಕೈಗೊಳ್ಳುವುದರ ಜೊತೆಗೆ, ರೈತರು ಬೆಳೆದ ಬೆಳೆಗಳನ್ನು ರಕ್ಷಿಸಲು ಅರಣ್ಯ ಇಲಾಖೆ ಮತ್ತು ಗ್ರಾಮಸ್ಥರ ಸಹಯೋಗದೊಂದಿಗೆ ಸಹಾಯಧನ ರೂಪದಲ್ಲಿ 50:50 ಆಧಾರದಲ್ಲಿ ಸೌರಶಕ್ತಿ ಬೇಲಿಯನ್ನು ನಿರ್ಮಾಣ ಮಾಡುವ ಯೋಜನೆಯು ಜಾರಿಯಲ್ಲಿರುತ್ತದೆ.<br>10. ರಾಜ್ಯದಲ್ಲಿ ಆನೆಗಳ ಸಂಖ್ಯೆ ಅಧಿಕವಾಗಿರುವ ಪ್ರದೇಶಗಳಲ್ಲಿ ಮಾನವ ಆನೆ ಸಂಘರ್ಷವನ್ನು ಪರಿಣಾಮಕಾರಿಯಾಗಿ ತಡೆಯುವ ಸಲುವಾಗಿ ಉಪಯೋಗಿಸಿ ಬಿಟ್ಟ ರೈಲ್ವೆ ಹಳಿಗಳನ್ನು ಬಳಸಿಕೊಂಡು ಅರಣ್ಯಗಳ ಸುತ್ತ ಬ್ಯಾರಿಕೇಡನ್ನು ನಿರ್ಮಾಣ ಮಾಡುವ ಕಾರ್ಯವನ್ನು ಸಹ ಹಮ್ಮಿಕೊಳ್ಳಲಾಗುತ್ತಿದೆ. |

ಸಂಖ್ಯೆ: ಅಪಜೀ 115 ಎಫ್‌ಡಬ್ಲ್ಯೂಎಲ್ 2018

(ಆರ್. ಶಂಕರ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

ಆರ್. ಶಂಕರ್
ಅರಣ್ಯ, ಪರಿಸರ ಮತ್ತು ಜೀವಿಶಾಸ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 564 |
| ಉತ್ತರಿಸುವ ದಿನಾಂಕ | 09-07-2018 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸಂಜೀವ್ ಮಠಂದೂರ್ (ಪುತ್ತೂರ್) |
| ಉತ್ತರಿಸುವ ಸಚಿವರು | ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪುತ್ತೂರು ಉಪ ನೋಂದಣಿ ಕಛೇರಿಯನ್ನು ನೂತನವಾಗಿ ಕಟ್ಟಿದ ಮಿನಿ ವಿಧಾನ ಸೌಧಕ್ಕೆ ಸ್ಥಳಾಂತರಿಸಲು ಯಾವ ಕ್ರಮ ತೆಗೆದುಕೊಳ್ಳಲಾಗಿದೆ. | ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಕಛೇರಿಯ ಪತ್ರದ ಸಂಖ್ಯೆ: ಬಿ.ಎಲ್.ಡಿ 28/15-16 ದಿನಾಂಕ: 04-07-2018ರಲ್ಲಿ ಪುತ್ತೂರು ಉಪ ನೋಂದಣಿ ಕಛೇರಿಯನ್ನು ಮಿನಿವಿಧಾಸೌಧಕ್ಕೆ ಸ್ಥಳಾಂತರಿಸಲು ಅನುಮತಿ ನೀಡಲಾಗಿದೆ. |
| ಆ | ಯಾವಾಗ ಸ್ಥಳಾಂತರ ಮಾಡಲಾಗುತ್ತದೆ. (ವಿವರ ಒದಗಿಸುವುದು) | ಪುತ್ತೂರು ಉಪ ನೋಂದಣಿ ಕಛೇರಿಯನ್ನು ಮಿನಿ ವಿಧಾನಸೌಧಕ್ಕೆ ಕೂಡಲೇ ಸ್ಥಳಾಂತರಿಸಲು ಕ್ರಮ ಕೈಗೊಂಡು ವರದಿಯನ್ನು ಸಲ್ಲಿಸಲು ಜಿಲ್ಲಾ ನೋಂದಣಾಧಿಕಾರಿಗಳು (ದಕ್ಷಿಣ ಕನ್ನಡ) ಮಂಗಳೂರು ಇವರಿಗೆ ನಿರ್ದೇಶನ ನೀಡಲಾಗಿದ್ದು, ಆ ಪ್ರಕಾರ ಕ್ರಮ ವಹಿಸಲಾಗುವುದು. |

ಸಂಖ್ಯೆ: ಕಂಇ 94 ಮುನೋಸ 2018

ಆರ್.ವಿ.ದೇಶಪಾಂಡೆ
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಹಾಗೂ ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :: 114

ಸದಸ್ಯರ ಹೆಸರು :: ಡಾ॥ ಉಮೇಶ್ ಜಿ.ಜಾಧವ್ (ಚಿಂಚೋಳಿ)

ಉತ್ತರಿಸುವ ದಿನಾಂಕ :: 09-07-2018

ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆ ಚಿಂಚೋಳಿ ತಾಲ್ಲೂಕಿನ ಗಡಿ ಪ್ರದೇಶವಾದ ಶಾದಿಪುರ ಗ್ರಾಮದ ಸುತ್ತಮುತ್ತ ಪ್ರದೇಶವನ್ನು ಪಕ್ಕದ ರಾಜ್ಯದ ಜನರು ಅತಿಕ್ರಮಣ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ ಅತಿಕ್ರಮಣ ಮಾಡಿರುವ ಪ್ರದೇಶವನ್ನು ವಶಕ್ಕೆ ಪಡೆಯಲು ಸರ್ಕಾರವು ಮರು ಸರ್ವೆ ಮಾಡಲು ಇಲ್ಲಿಯವರೆಗೆ ಕೈಗೊಂಡ ಕ್ರಮವೇನು; (ವಿವರ ನೀಡುವುದು)? | ಜಿಲ್ಲಾಧಿಕಾರಿಗಳು ಕಲಬುರಗಿ ಇವರ ಅಧಿಕೃತ ಜ್ಞಾಪನಾ ಸಂಖ್ಯೆ:ಜಿತಾಂಸ/6/ಇತರೆ/39/2017-18, ದಿನಾಂಕ:07-06-2018 ರನ್ವಯ ಶಾದಿಪುರ ಗ್ರಾಮದ ಗಡಿಯ ಸರ್ವೆ.ನಂ.126 ಮತ್ತು 127ರ ಅಳತೆ ಮಾಡಿ ಗಡಿಯನ್ನು ಗುರುತಿಸಿ ಅಳತೆ ಕೆಲಸ ಕೈಗೊಂಡು ವರದಿಯನ್ನು ಸಲ್ಲಿಸಲು ಈ. ಕೆಳಕಂಡ ಅಧಿಕಾರಿಗಳನ್ನೊಳಗೊಂಡ ತಂಡ ರಚಿಸಲಾಗಿರುತ್ತದೆ. |

| ಕ್ರ.ಸಂ. | ತಂಡದ ಸದಸ್ಯರು |
|---|---|
| 1 | ಜಿಲ್ಲಾಧಿಕಾರಿಗಳ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪನಿರ್ದೇಶಕರು ಕಲಬುರಗಿ |
| 2 | ಸಹಾಯಕ ಆಯುಕ್ತರು ಸೇಡಂ ಉಪವಿಭಾಗ ಸೇಡಂ |
| 3 | ಭೂದಾಖಲೆಗಳ ಸಹಾಯಕ ನಿರ್ದೇಶಕರು ಚಿಂಚೋಳಿ |
| 4 | ತಹಶೀಲ್ದಾರರು ಚಿಂಚೋಳಿ |
| 5 | ಗ್ರಾಮಲೆಕ್ಕಾಧಿಕಾರಿ ಶಾದಿಪುರ |
| 6 | ಪರ್ಯಾವೇಕ್ಷಕರು ಚಿಂಚೋಳಿ |
| 7 | ಭೂಮಾಪಕರು ಚಿಂಚೋಳಿ |

ಸದರಿ ಶಾದಿಪುರ ಗ್ರಾಮದ ಸುತ್ತಮುತ್ತಲಿನ ಪ್ರದೇಶಗಳ ಅಳತೆ ಕೆಲಸವು ಪ್ರಗತಿಯಲ್ಲಿರುತ್ತದೆ.

ಸಂಖ್ಯೆ: ಆರ್‌ಡಿ 24 ಎಲ್‌ಜಿಜಿ 2018

( ಆರ್.ವಿ. ದೇಶಪಾಂಡೆ )
ಕಂದಾಯ ಸಚಿವರು



**ಕರ್ನಾಟಕ ವಿಧಾನಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 569 |
| ಸದಸ್ಯರ ಹೆಸರು | : | ಶ್ರೀ ನರಸಿಂಹನಾಯಕ್ (ರಾಜೂಗೌಡ) (ಸುರಪುರ) |
| ಉತ್ತರಿಸುವ ದಿನಾಂಕ | : | 09.07.2018 |
| ಉತ್ತರಿಸುವ ಸಚಿವರು | : | ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಂದಾಯ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಗ್ರಾಮ ಸಹಾಯಕರ ಸಂಬಳ ಎಷ್ಟು; | ಗ್ರಾಮ ಸಹಾಯಕರಿಗೆ ದಿನಾಂಕ:01.04.2018 ರಿಂದ ಜಾರಿಗೆ ಬರುವಂತೆ ಮಾಸಿಕ ರೂ.12,000/-ಗಳ ಮಿತವೇತನವನ್ನು ನೀಡಲಾಗುತ್ತಿದೆ. |
| (ಆ) | ಈ ಗ್ರಾಮ ಸಹಾಯಕರಿಗೆ ಪ್ರತಿ ತಿಂಗಳು ಸಿಗುವ ವೇತನವೆಷ್ಟು; | |
| (ಇ) | ಸದ್ಯ ಖಾಲಿಯಿರುವ ಗ್ರಾಮ ಸಹಾಯಕರ ಹುದ್ದೆಗಳೆಷ್ಟು; ಯಾವಾಗ ಭರ್ತಿ ಮಾಡಲಾಗುವುದು? | ಪ್ರಸ್ತುತ 565 ಗ್ರಾಮ ಸಹಾಯಕರ ಹುದ್ದೆಗಳು ಖಾಲಿ ಇರುತ್ತವೆ. ಖಾಲಿ ಇರುವ ಗ್ರಾಮ ಸಹಾಯಕರನ್ನು ಸಂಬಂಧಪಟ್ಟ ತಹಶೀಲ್ದಾರ್‌ರವರು ಕಾಲಕಾಲಕ್ಕೆ ಭರ್ತಿ ಮಾಡುತ್ತಿರುತ್ತಾರೆ. |

ಸಂಖ್ಯೆ:ಕಂಇ 146 ಬಿಎಸ್‌ಐ 2018

**ಆರ್.ವಿ.ದೇಶಪಾಂಡೆ**
ಕಂದಾಯ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ
ಮತ್ತು ಜೀವನೋಪಾಯ ಸಚಿವರು

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 533
ಉತ್ತರಿಸಬೇಕಾದ ದಿನಾಂಕ : 09.7.2018
ಸದಸ್ಯರ ಹೆಸರು : ಶ್ರೀ ಜೆ.ಸಿ.ಮಾಧುಸ್ವಾಮಿ

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳಲ್ಲಿ ತುಮಕೂರು ಜಿಲ್ಲೆಯ ನಿರ್ಮಿತಿ ಕೇಂದ್ರಕ್ಕೆ ವಹಿಸಿದ ಕೆಲಸಗಳ ಸಂಖ್ಯೆ ಎಷ್ಟು? ಇದಕ್ಕೆ ತಗುಲಿದ ಹಣದ ಪ್ರಮಾಣವೇನು?</td><td>ಕಳೆದ ಮೂರು (2015-16 ರಿಂದ 2017-18 ರವರೆಗೆ) ವರ್ಷಗಳಲ್ಲಿ ತುಮಕೂರು ಜಿಲ್ಲೆಯ ನಿರ್ಮಿತಿ ಕೇಂದ್ರಕ್ಕೆ 585 ಕೆಲಸಗಳನ್ನು ವಹಿಸಿದೆ ಹಾಗೂ ಇದಕ್ಕೆ ತಗುಲಿದ ಹಣದ ಪ್ರಮಾಣ ರೂ.14789.00 ಲಕ್ಷಗಳು.</td></tr>
<tr><td>ಆ)</td><td>ಈ ಪೈಕಿ ಎಷ್ಟು ಕಾಮಗಾರಿಗಳು ಮುಗಿದಿರುತ್ತವೆ; ಎಷ್ಟು ಬಾಕಿ ಇವೆ;</td><td>ಈ ಪೈಕಿ 438 ಕಾಮಗಾರಿಗಳು ಮುಗಿದಿರುತ್ತವೆ. ಹಾಗೂ ಇನ್ನು 147 ಕಾಮಗಾರಿಗಳು ಬಾಕಿ ಇರುತ್ತವೆ.</td></tr>
<tr><td>ಇ)</td><td>ನಿರ್ಮಿತಿ ಕೇಂದ್ರದಲ್ಲಿ ಮೇಲ್ವಿಚಾರಣೆಗೆ ಇರುವ ಸಿಬ್ಬಂದಿ ಮತ್ತು ಕಾಮಗಾರಿ ಮಾಡಲು ಇರುವ ಸಿಬ್ಬಂದಿ ಎಷ್ಟು;</td><td>ನಿರ್ಮಿತಿ ಕೇಂದ್ರದಲ್ಲಿ ಮೇಲ್ವಿಚಾರಣೆಗೆ ಮತ್ತು ಕಾಮಗಾರಿ ಮಾಡಲು ಸಿಬ್ಬಂದಿಯ ವಿವರ ಈ ಕೆಳಕಂಡಂತಿದೆ.
<table>
<tr><th>ಕ್ರ ಸಂ</th><th>ಪದನಾಮ</th><th>ಸಿಬ್ಬಂದಿ ಸಂಖ್ಯೆ</th></tr>
<tr><td>1</td><td>ಯೋಜನಾ ವ್ಯವಸ್ಥಾಪಕರು</td><td>1</td></tr>
<tr><td>2</td><td>ತಾಂತ್ರಿಕ ಸಹಾಯಕರು</td><td>1</td></tr>
<tr><td>3</td><td>ತಾಂತ್ರಿಕ ಸಿಬ್ಬಂದಿ</td><td>1</td></tr>
<tr><td>4</td><td>ಕಾಮಗಾರಿ ನಿರ್ವಹಿಸಲು ತಾಲ್ಲೂಕು ಮಟ್ಟದಲ್ಲಿ ಶಾಖಾ ಇಂಜಿನಿಯರ್<br>ಬಿ.ಇ. ಪಧವಿದರರು -4 ಸಂಖ್ಯೆ<br>ಡಿಪ್ಲಮೊ -4 ಸಂಖ್ಯೆ</td><td>8</td></tr>
<tr><td>5</td><td>ಕಾಮಗಾರಿ ಪರಿವೀಕ್ಷಕರು</td><td>4</td></tr>
<tr><td>6</td><td>ಆಡಳಿತ ಶಾಖೆ</td><td>3</td></tr>
<tr><td>7</td><td>ಲೆಕ್ಕ ಶಾಖೆ</td><td>3</td></tr>
<tr><td>8</td><td>ಭದ್ರತಾ ಸಿಬ್ಬಂದಿ</td><td>1</td></tr>
<tr><td>9</td><td>ವಾಹನ ಚಾಲಕರು</td><td>2</td></tr>
<tr><td></td><td>ಒಟ್ಟು</td><td>24</td></tr>
</table></td></tr>
<tr><td>ಈ)</td><td>ಕಾಮಗಾರಿಗಳನ್ನು ನಿರ್ವಹಿಸಲು ಅನುಕೂಲವಿಲ್ಲದಿದ್ದಾಗ್ಯೂ ಇಷ್ಟು ಕೆಲಸ ನಿರ್ವಹಿಸಲು ಹೇಗೆ ಸಾಧ್ಯವಾಯಿತು; ಸರ್ಕಾರದ ಕಾಯಿದೆಗೆ ಇದು ವಿರೋಧವಲ್ಲವೆ?(ವಿವರ ಒದಗಿಸುವುದು)</td><td>ನಿರ್ಮಿತಿ ಕೇಂದ್ರದ ತಾಲ್ಲೂಕು ಮಟ್ಟದ ತಾಂತ್ರಿಕ ಸಿಬ್ಬಂದಿಗಳು ಆಯಾ ತಾಲ್ಲೂಕುಗಳಲ್ಲಿ ಕಾಮಗಾರಿಗಳನ್ನು ನಿರ್ವಹಿಸಲು ಅವಶ್ಯಕತೆಗೆ ಅನುಗುಣವಾಗಿ ನುರಿತ ಕೆಲಸಗಾರರನ್ನು ದಿನಗೂಲಿ ಆಧಾರದ ಮೇಲೆ ಪಡೆದು ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿರುತ್ತದೆ.<br><br>ನಿರ್ಮಿತಿ ಕೇಂದ್ರವು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ) ರಡಿ ನೀಡಿರುವ ವಿನಾಯಿತಿಯಂತೆ ಕಾಮಗಾರಿಗಳನ್ನು ನಿರ್ವಹಿಸಲಾಗುತ್ತಿದೆ.</td></tr>
</table>

ಸಂಖ್ಯೆ: ವಇ 177 ಹೆಚ್ಎಎಂ 2018

(ಯು.ಟಿ.ಅಬ್ದುಲ್ ಖಾದರ್)
ವಸತಿ ಸಚಿವರು.